| ಜಿಲ್ಲೆ | ಕಾಮಗಾರಿಗಳ ಸಂಖ್ಯೆ | | | ಅಂದಾಜು ಮೊತ್ತ | | | ಪೂರ್ಣಗೊಂಡಿರುವ ಕಾಮಗಾರಿಗಳು | | | ಪ್ರಗತಿಯಲ್ಲಿರುವ ಕಾಮಗಾರಿಗಳ ಸಂಖ್ಯೆ | | | ಬಾಕಿ ಉಳಿದಿರುವ/ಪ್ರಾರಂಭಿಸಬೇಕಾದ ಕಾಮಗಾರಿಗಳ ಸಂಖ್ಯೆ | | |
|---|---|---|---|---|---|---|---|---|---|---|---|---|---|---|---|
| | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು |
| ಮೈಸೂರು | 171 | 109 | 280 | 36.7169 | 5.340257 | 42.057 | 104 | 68 | 172 | 22 | 16 | 38 | 45 | 25 | 70 |
| ರಾಯಚೂರು | 172 | 122 | 294 | 17.9659 | 2.589959 | 20.556 | 128 | 96 | 224 | 41 | 25 | 66 | 3 | 1 | 4 |
| ರಾಮನಗರ | 52 | 38 | 90 | 5.524 | 0.986745 | 6.5107 | 37 | 25 | 62 | 14 | 12 | 26 | 1 | 1 | 2 |
| ಶಿವಮೊಗ್ಗ | 115 | 65 | 180 | 13.5267 | 2.206095 | 15.733 | 83 | 49 | 132 | 31 | 16 | 47 | 1 | 0 | 1 |
| ತುಮಕೂರು | 111 | 66 | 177 | 7.1544 | 1.800525 | 8.9549 | 101 | 56 | 157 | 10 | 10 | 20 | 0 | 0 | 0 |
| ಉಡುಪಿ | 35 | 30 | 65 | 2.7735 | 0.697446 | 3.4709 | 33 | 28 | 61 | 2 | 2 | 4 | 0 | 0 | 0 |
| ಉತ್ತರ ಕನ್ನಡ | 224 | 166 | 390 | 7.2016 | 1.334411 | 8.536 | 218 | 164 | 382 | 6 | 2 | 8 | 0 | 0 | 0 |
| ವಿಜಯಪುರ | 151 | 88 | 239 | 12.5096 | 2.049568 | 14.559 | 132 | 70 | 202 | 19 | 18 | 37 | 0 | 0 | 0 |
| ಯಾದಗಿರಿ | 83 | 50 | 133 | 8.175 | 1.152413 | 9.3274 | 59 | 30 | 89 | 22 | 17 | 39 | 0 | 0 | 0 |
| ಒಟ್ಟು | 3936 | 2726 | 6662 | 343.3285 | 55.63253 | 398.96 | 3252 | 2268 | 5520 | 598 | 401 | 999 | 86 | 57 | 143 |

ಶ್ರೀ. ಯತೀಂದ್ರ ಸಿದ್ದರಾಮಯ್ಯ, ವರುಣ ಕ್ಷೇತ್ರ, ಮಾನ್ಯ ವಿಧಾನ ಸಭಾ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 776ಕ್ಕೆ ಅನುಬಂಧ –14

| ಇಲಾಖೆ | ಭಾರೀ ನೀರಾವರಿ | | | ಯೋಜನೆ: ವಿವಿಧ ಕಾಮಗಾರಿಗಳು | | | | | | | | | | |
|---|---|---|---|---|---|---|---|---|---|---|---|---|---|---|
| | | | | | | | | | | | | | (ರೂ. ಕೋಟಿಗಳಲ್ಲಿ) | |
| ಜಿಲ್ಲೆ | ಕಾಮಗಾರಿಗಳ ಸಂಖ್ಯೆ | | | ಅಂದಾಜು ಮೊತ್ತ | | | ಪೂರ್ಣಗೊಂಡಿರುವ ಕಾಮಗಾರಿಗಳು | | | ಪ್ರಗತಿಯಲ್ಲಿರುವ ಕಾಮಗಾರಿಗಳ ಸಂಖ್ಯೆ | | | ಬಾಕಿ ಉಳಿದಿರುವ/ಪ್ರಾರಂಭಿಸಬೇಕಾದ ಕಾಮಗಾಗಿಗಳ ಸಂಖ್ಯೆ | |
| | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು | ಎಸ್.ಸಿ.ಎಸ್.ಪಿ | ಟಿ.ಎಸ್.ಪಿ | ಒಟ್ಟು |
| ಬಳ್ಳಾರಿ | 4 | 4 | 8 | 5.35 | 2.15 | 7.50 | 0 | 0 | 0 | 4 | 4 | 8 | 0 | 0 | 0 |
| ಚಿಕ್ಕಮಗಳೂರು | 8 | 5 | 13 | 1.00 | 0.75 | 1.75 | 0 | 0 | 0 | 8 | 5 | 13 | 0 | 0 | 0 |
| ಚಿತ್ರದುರ್ಗ | 1 | 1 | 2 | 0.60 | 0.75 | 1.35 | 0 | 0 | 0 | 1 | 1 | 2 | 0 | 0 | 0 |
| ಧಾರವಾಡ | 4 | 2 | 6 | 4.20 | 0.30 | 4.50 | 0 | 0 | 0 | 4 | 2 | 6 | 0 | 0 | 0 |
| ಹಾಸನ | 25 | 14 | 39 | 6.33 | 2.81 | 9.14 | 8 | 4 | 12 | 17 | 10 | 27 | 0 | 0 | 0 |
| ಕೊಡಗು | 64 | 27 | 91 | 44.90 | 15.00 | 59.91 | 0 | 0 | 0 | 64 | 27 | 91 | 0 | 0 | 0 |
| ಮಂಡ್ಯ | 157 | 37 | 194 | 0.02 | 0.01 | 0.03 | 45 | 18 | 63 | 109 | 19 | 128 | 3 | 0 | 3 |
| ಮೈಸೂರು | 76 | 70 | 146 | 11.28 | 14.53 | 25.81 | 1 | 2 | 3 | 72 | 65 | 137 | 3 | 3 | 6 |
| ರಾಮನಗರ | 34 | 1 | 35 | 6.52 | 0.50 | 7.02 | 0 | 0 | 0 | 34 | 1 | 35 | 0 | 0 | 0 |
| ತುಮಕೂರು | 355 | 244 | 599 | 60.64 | 37.05 | 97.69 | 87 | 67 | 154 | 234 | 162 | 396 | 34 | 15 | 49 |
| ಒಟ್ಟು | 728 | 405 | 1133 | 140.85 | 73.85 | 214.71 | 141 | 91 | 232 | 547 | 296 | 843 | 40 | 18 | 58 |

ಸದರಿ ಮಾಹಿತಿಯನ್ನು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ Work Monitoring System ತಂತ್ರಾಂಶದಲ್ಲಿ ಭಾರೀ ನೀರಾವರಿ ಇಲಾಖೆ ಅಪ್‌ಲೋಡ್ ಮಾಡಿರುವ ವಿವರದಿಂದ ಪಡೆಯಲಾಗಿದೆ.

E-D



**ಕರ್ನಾಟಕ ಸರ್ಕಾರ**

ಸಂಖ್ಯೆ: ಇಪಿ 43 ಎಂ.ಹೆಚ್.ಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:18.02.2021

**ಇಂದ,**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಶಿಕ್ಷಣ ಇಲಾಖೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಬಹುಮಹಡಿಗಳ ಕಟ್ಟಡ,
ಬೆಂಗಳೂರು

**ರವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು

**ಮಾನ್ಯರೇ,**

ವಿಷಯ: ವಿಧಾನಸಭೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 931ಕ್ಕೆ ಉತ್ತರಿಸುವ ಬಗ್ಗೆ.

****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಹ್ಯಾರಿಸ್.ಎನ್.ಎ(ಶಾಂತಿನಗರ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 931ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಎಸ್.ಆರ್.ಎಸ್. ನಾಥನ್) 18/2/21
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

18/02

Recd
19/02/2021

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 931 |
| ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್‌ಎನ್.ಎ(ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | : | 04.02.2021 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ದುಷ್ಪರಿಣಾಮದ ಸುರಕ್ಷತೆಯ ದೃಷ್ಟಿಯಿಂದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸಿಕೊಂಡ ಬದಲಾವಣೆಗಳಾವುವು; (ವಿವರ ನೀಡುವುದು) | ಶಾಲಾ ಕೋಣೆಗಳಿಗೆ ಸ್ಯಾನಿಟೈಸೇಷನ್ ಮಾಡುವುದು, ಮಕ್ಕಳು ಸ್ಯಾನಿಟೈಸ್ ಮಾಡಿಕೊಳ್ಳುವುದು, ಸಾಬೂನಿನಿಂದ ಕೈತೊಳೆದುಕೊಳ್ಳುವುದು, ಮಕ್ಕಳು ಮತ್ತು ಶಿಕ್ಷಕರನ್ನು ಥರ್ಮಲ್ ಸ್ಕ್ಯಾನರ್‌ನಿಂದ ಪರೀಕ್ಷೆ ಮಾಡುವುದು, ಶಿಕ್ಷಕರು ಆರ್.ಟಿ.ಪಿ.ಸಿ.ಆರ್ ರಿಪೋರ್ಟ್ ತರುವುದು, ಪಾಸಿಟಿವ್ ಬಂದ ಶಿಕ್ಷಕರನ್ನು ಹೋಮ್ ಐಸೋಲೇಷನ್ ನಲ್ಲಿ ಇರಿಸುವುದು, ರೋಗ ಲಕ್ಷಣಗಳು ಕಂಡುಬಂದಲ್ಲಿ ಸಮೀಪದ ಆರೋಗ್ಯ ಕೇಂದ್ರಗಳನ್ನು ಸಂಪರ್ಕಿಸುವುದು, ಸರ್ಕಾರದ ಮಾರ್ಗ ಸೂಚಿಯನ್ವಯ ವೇಳಾ ಪಟ್ಟಿಯನ್ನು ಬದಲಾಯಿಸಿಕೊಂಡು 1-5ನೇ ತರಗತಿ ಮಕ್ಕಳಿಗೆ ರೇಡಿಯೋ ಪಾಠಗಳು ಹಾಗೂ 6-8 ನೇ ತರಗತಿಗೆ ವಿದ್ಯಾಗಮ ಮತ್ತು ದಿನಾಂಕ.01-02-2021 ರಿಂದ 9-10 ನೇ ತರಗತಿಗೆ ಪೂರ್ಣ ಪ್ರಮಾಣದ ತರಗತಿಗಳನ್ನು ನಡೆಸಲು Standard Operating Procedure (SOP) ಪಾಲಿಸುವುದರ ಮೂಲಕ ಕ್ರಮ ವಹಿಸಲಾಗಿದೆ. (ಸಿ4(6) ಸ.ಪ್ರೌ.ಶಾ/ಶಾ.ಕಾ.ಪ್ರ-23/2020-21 ದಿನಾಂಕ.23-12-2020ರ ಪ್ರತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ) | ಆನ್‌ಲೈನ್ ಶಿಕ್ಷಣ ನೀಡಿಕೆಯ ಪರಿಣಾಮಗಳು, ದುಷ್ಪರಿಣಾಮಗಳು ಯಾವುವು; | <u>ಆನ್‌ಲೈನ್ ಶಿಕ್ಷಣ ನೀಡಿಕೆಯ ಪರಿಣಾಮಗಳು</u><br>• ಕೋವಿಡ್-19 ಹಿನ್ನಲೆಯಲ್ಲಿ ಶಾಲೆಗಳು ನಡೆಯದಿದ್ದಾಗ ಮಕ್ಕಳ ಕಲಿಕಾ ನಿರಂತರತೆಗೆ ಇದು ಸಹಾಯವಾಗಿದೆ.<br>• ಮಕ್ಕಳು ಕಲಿಕೆಯಿಂದ ವಿಮುಖರಾಗುವುದನ್ನು ತಡೆಗಟ್ಟಲು ಹಾಗೂ ಸಮಾಜ ಬಾಹಿರ ಹಾಗೂ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ಮಕ್ಕಳು |

| | | |
|---|---|---|
| | | ತೊಡಗುವುದನ್ನು ಹಾಗೂ ಬಾಲ ಕಾರ್ಮಿಕತೆಯನ್ನು ತಡೆಗಟ್ಟಲು ಅನುಕೂಲವಾಗಿದೆ.<br><br><u>ಆನ್‌ಲೈನ್ ಶಿಕ್ಷಣ ನೀಡಿಕೆಯ ದುಷ್ಪರಿಣಾಮಗಳು</u><br><br>ಮಕ್ಕಳಿಗೆ ಆನ್ ಲೈನ್ ಶಿಕ್ಷಣ ನಡೆಯುವ ಸಂದರ್ಭದಲ್ಲಿ ಮಕ್ಕಳನ್ನು ಮಾನಿಟರಿಂಗ್ ಮಾಡುವಲ್ಲಿ ತೊಂದರೆ ಉಂಟಾಗುತ್ತದೆ. |
| ಇ) | ಆನ್‌ಲೈನ್ ನೀತಿಯ ಸಾಧ್ಯಾಸಾಧ್ಯತೆಗಳ ಕುರಿತು ತಜ್ಞರ ಅಭಿಪ್ರಾಯಗಳ ಕುರಿತು ಸರ್ಕಾರದ ನಿರ್ಧಾರಗಳೇನು; | ಆನ್‌ಲೈನ್ ನೀತಿಯ ಸಾಧ್ಯಾಸಾಧ್ಯತೆಗಳ ಕುರಿತು ತಜ್ಞರ ಅಭಿಪ್ರಾಯಗಳನ್ನು ಆಯುಕ್ತರ ಕಛೇರಿ ಸುತ್ತೋಲೆ ಸಂಖ್ಯೆ: ಸಂಖ್ಯೆ:ಎಡಿಎಂ.2.ಸಿಪಿಐ.ಬಿಎಂ.49 ಇಪಿ 2020-21, ದಿನಾಂಕ:22.10.2020ರ ಪ್ರತಿಯನ್ನು ಅನುಬಂಧ(2)ರಲ್ಲಿ ಲಗತ್ತಿಸಿದೆ. |
| ಈ) | ವಿದ್ಯಾರ್ಥಿಗಳಿಗೆ ಖಾಸಗಿ ಶಾಲೆಗಳಲ್ಲಿ ಶುಲ್ಕ ವಿಧಿಸುವ ಕುರಿತು ಸರ್ಕಾರ ವಿಧಿಸಿರುವ ನೀತಿ ನಿಯಮಗಳಾವುವು?(ವಿವರ ನೀಡುವುದು) | ವಿದ್ಯಾರ್ಥಿಗಳಿಗೆ ಖಾಸಗಿ ಶಾಲೆಗಳಲ್ಲಿ ಶುಲ್ಕ ವಿಧಿಸುವ ಕುರಿತು ಸರ್ಕಾರ ವಿಧಿಸಿರುವ ನೀತಿ ನಿಯಮಗಳ ಕುರಿತು ಸರ್ಕಾರದ ಆದೇಶ ಸಂಖ್ಯೆ:ಇಪಿ 33 ಪಿ.ಜಿ.ಸಿ 2021 ಬೆಂಗಳೂರು, ದಿನಾಂಕ.29-01-2021ರ ಪ್ರತಿಯನ್ನು ಅನುಬಂಧ(3)ರಲ್ಲಿ ಲಗತ್ತಿಸಿದೆ. |

ಇಪಿ 43 ಎಂ.ಹೆಚ್.ಟಿ 2021

S. Suresh

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

ಅನುಬಂಧ-1



ಕರ್ನಾಟಕ ಸರ್ಕಾರ

ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು-1

ಸಂಖ್ಯೆ:ಸಿ4(6) ಸಪ್ರೌಶಾ/ಶಾ.ಕಾ.ಪ್ರ-23/2020-21 ದಿನಾಂಕ: 23.12.2020

-ಸುತ್ತೋಲೆ-

ವಿಷಯ: ರಾಜ್ಯದಲ್ಲಿನ ಸರ್ಕಾರಿ, ಅನುದಾನ ಮತ್ತು ಅನುದಾನ ರಹಿತ ಪ್ರೌಢ ಶಾಲೆಗಳಲ್ಲಿನ 10ನೇ ತರಗತಿ ವಿದ್ಯಾರ್ಥಿಗಳಿಗೆ ಶಾಲೆಗಳನ್ನು ಪುನರಾರಂಭಿಸುವ ಬಗ್ಗೆ.

ಉಲ್ಲೇಖ:
1. ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಮಾನ್ಯ ಆರೋಗ್ಯ ಸಚಿವರು ಹಾಗೂ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಉಪಸ್ಥಿತಿಯಲ್ಲಿ ಇಲಾಖಾ ಅಧಿಕಾರಿಗಳ ಸಮಕ್ಷಮದೊಂದಿಗೆ ದಿನಾಂಕ: 19.12.2020 ರಂದು ನಡೆದ ಸಭೆಯಲ್ಲಿ ಕೈಗೊಂಡ ನಿರ್ಣಯಗಳು
2. ಸರ್ಕಾರದ ಆದೇಶ ಸಂಖ್ಯೆ: ಇಡಿ 172 ಪಿಜಿಸಿ 2020 ದಿನಾಂಕ: 15.12.2020
3. ಆರೋಗ್ಯ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯವರು ದಿನಾಂಕ 17.12.2020ರಂದು ನೀಡಿರುವ ನಡವಳಿಗಳು
4. ಈ ಕಚೇರಿಯ ಸುತ್ತೋಲೆ ಸಮ ಸಂಖ್ಯೆ:ದಿನಾಂಕ: 17.12.2020
5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಶಿಕ್ಷಣ ಇಲಾಖೆ, ಬೆಂಗಳೂರು ರವರ ಟಿಪ್ಪಣಿಯಲ್ಲಿನ ಆದೇಶ ದಿನಾಂಕ: 22.12.2020
6. ದಿನಾಂಕ: 23.12.2020ರಂದು ಮಾನ್ಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿನಡೆದ ಎಲ್ಲ ಜಿಲ್ಲೆಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಉಪನಿರ್ದೇಕರು (ಆಡಳಿತ) ಮತ್ತು (ಅಭಿವೃದ್ಧಿ), ಉಪನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ವಿಡಿಯೋ ಸಂವಾದದಲ್ಲಿ ತೆಗೆದು ಕೊಂಡ ನಿರ್ಣಯಗಳು.

**********

ರಾಜ್ಯದಲ್ಲಿನ ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ ಪ್ರೌಢ ಶಾಲೆಗಳಲ್ಲಿನ 10ನೇ ತರಗತಿ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಚಟುವಟಿಕೆಗಳನ್ನು ಪ್ರಾರಂಭಿಸುವಂತೆ ಉಲ್ಲೇಖ(1)ರಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಮಾನ್ಯ ಆರೋಗ್ಯ ಸಚಿವರು ಹಾಗೂ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಉಪಸ್ಥಿತಿಯಲ್ಲಿ ಇಲಾಖಾ ಅಧಿಕಾರಿಗಳ ಸಮಕ್ಷಮದೊಂದಿಗೆ ನಿರ್ಣಯಿಸಿ ಸೂಚಿಸಿರುವಂತೆ 10ನೇ ಮತ್ತು 12ನೇ ತರಗತಿಗಳನ್ನು ದಿನಾಂಕ: 01.01.2021ರಿಂದ ಪ್ರಾರಂಭಿಸಲು ಇಲಾಖೆಯು ನಿಗಧಿಪಡಿಸಿರುವ ವೇಳಾ ಪಟ್ಟಿಯಂತೆ ಹಾಗೂ ಪ್ರಮಾಣೀತ ಕಾರ್ಯಾಚರಣಾ ವಿಧಾನ ಮತ್ತು ಉಲ್ಲೇಖ(3)ರಲ್ಲಿ ಆರೋಗ್ಯ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯವರು ನೀಡಿರುವ ಮಾರ್ಗಸೂಚಿಗಳು, ಉಲ್ಲೇಖ(5) ಮತ್ತು ಉಲ್ಲೇಖ (6)ರಲ್ಲಿ ವಿಡಿಯೋ ಸಂವಾದದಲ್ಲಿ ತೆಗೆದುಕೊಂಡ ನಿರ್ಣಯಗಳನ್ನು ಅನುಸರಿಸಿ ಶಾಲೆಗಳನ್ನು ಪ್ರಾರಂಭಿಸಲು ಸರ್ಕಾರವು ಸೂಚನೆ ನೀಡಿರುತ್ತದೆ.

**ಆರೋಗ್ಯ ಇಲಾಖೆಯ ತಾಂತ್ರಿಕ ಸಲಹಾ ಸಮಿತಿಯವರು ನೀಡಿರುವ ಶಿಫಾರಸ್ಸುಗಳು-**

ದಿನಾಂಕ: 17.12.2020 ರಂದು ಮಾನ್ಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನೀಡಿದ ಶಿಫಾರಸ್ಸುಗಳು

- ದಿನಾಂಕ: 01.01.2021 ರಿಂದ 10 ಮತ್ತು 12ನೇ ತರಗತಿಗಳನ್ನು ಪ್ರಾರಂಭಿಸುವುದು ಈ ಅನುಭವದ ಆಧಾರದ ಮೇಲೆ ದಿನಾಂಕ: 15.01.2021 ರಿಂದ 11ನೇ ತರಗತಿಯನ್ನು ಪ್ರಾರಂಭಿಸುವುದು.
- ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಗಳು ಹೊರಡಿಸುವ ಕೋವಿಡ್-19 ಶಿಷ್ಟಾಚಾರಗಳನ್ನು ಪಾಲಿಸುವುದು.
- ಶಾಲೆಗಳಲ್ಲಿ ಲಭ್ಯವಿರುವ ಭೌತಿಕ ಸೌಲಭ್ಯಗಳು ಮತ್ತು ಇತರೆ ಸೌಲಭ್ಯಗಳ ಪರಾಮರ್ಷಣೆ ಮಾಡಿ ಕೋವಿಡ್-19ರ ಮುನ್ನೆಚ್ಚರಿಕೆಗಳನ್ನು ತೆಗೆದುಕೊಂಡು ತರಗತಿಗಳನ್ನು ವ್ಯವಸ್ಥೆ ಮಾಡುವುದು.

- ಕೋವಿಡ್-19ರ ಸೋಂಕಿನ ಲಕ್ಷಣವುಳ್ಳ ವಿದ್ಯಾರ್ಥಿಗಳು, ಶಿಕ್ಷಕರು ಮತ್ತು ಸಿಬ್ಬಂದಿಗಳಿಗೆ ಕೋವಿಡ್-19ರ ಪರೀಕ್ಷೆಯನ್ನು ಮಾಡಿಸುವಂತೆ ಸಲಹೆ ನೀಡಲಾಗಿದೆ. ಅವರು ಹತ್ತಿರದ ಆಸ್ಪತ್ರೆ / ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ ಸಮನ್ವಯ ಸಾಧಿಸುವುದು.
- ವಸತಿ ಶಾಲೆಗಳ ಮತ್ತು ವಸತಿ ನಿಲಯಗಳ ಶಿಕ್ಷಕರು, ಸಿಬ್ಬಂದಿ ಮತ್ತು ವಿದ್ಯಾರ್ಥಿಗಳು ಪ್ರವೇಶ ಪಡೆಯುವ ಮುಂಚಿನ 72 ಗಂಟೆಗಳ ಅಂತರದಲ್ಲಿ ಕೋವಿಡ್-19ರ ಪರೀಕ್ಷೆ ಮಾಡಿಸಿದ ನೆಗೆಟೀವ್ ವರದಿಯನ್ನು ಸಲ್ಲಿಸುವುದು.
- ಶಾಲೆಗೆ ಹಾಜರಾಗಲು ಬಯಸದೇ ಇರುವ ವಿದ್ಯಾರ್ಥಿಗಳಿಗೆ ಈಗ ಅನುಸರಿಸುತ್ತಿರುವ ಆನ್-ಲೈನ್ / ಇತರ ಪರ್ಯಾಯ ವಿಧಾನವನ್ನು ಮುಂದುವರೆಸಿಕೊಂಡು ಹೋಗುವುದು.
- ಪ್ರತಿ ಶಾಲೆಯ ಮಕ್ಕಳನ್ನು ಥರ್ಮಲ್ ಸ್ಕ್ಯಾನರ್ ಮೂಲಕ ಪರೀಕ್ಷಿಸುವುದು. ಪ್ರತಿ ವಿದ್ಯಾರ್ಥಿ ಮಾಸ್ಕ್‌ಧರಿಸುವುದು ಹಾಗೂ ಭೌತಿಕ ಅಂತರವನ್ನು ಕಾಪಾಡಿಕೊಳ್ಳುವುದು ಕಡ್ಡಾಯ
- ಎಸ್.ಓ.ಪಿ ಅನುಸಾರ ಶಾಲೆಗಳಲ್ಲಿ ಸ್ಯಾನಿಟೈಸರ್ / ಸೋಪ್ ಇತರೆ ನೈರ್ಮಲೀಕರಣ ವ್ಯವಸ್ಥೆ ಮಾಡುವುದು.
- ಪ್ರತಿ ದಿನ ಶಿಕ್ಷಕರು ಶಾಲೆಯಲ್ಲಿ ಮಕ್ಕಳನ್ನು ಅವಲೋಕಿಸಿ ಕೋವಿಡ್-19ರ ಲಕ್ಷಣ ಕಂಡು ಬಂದಲ್ಲಿ ತಕ್ಷಣವೇ ಹತ್ತಿರದ ಆಸ್ಪತ್ರೆ / ಆರೋಗ್ಯ ಕೇಂದ್ರಕ್ಕೆ ತಪಾಸಣೆಗೆ ಸೂಚಿಸುವುದು.
- 50 ವರ್ಷ ಮೇಲ್ಪಟ್ಟ ಶಿಕ್ಷಕರು ಮತ್ತು ಸಿಬ್ಬಂದಿ ಶಾಲಾ ಅವಧಿಯಲ್ಲಿ ಕಡ್ಡಾಯವಾಗಿ ಮಾಸ್ಕ್ ಧರಿಸುವುದರ ಜೊತೆಗೆ ಫೇಸ್ ಶೀಲ್ಡ್ ಉಪಯೋಗಿಸಲು ಸಲಹೆ ನೀಡಿದೆ.
- ಮಧ್ಯಾಹ್ನ ಉಪಹಾರ ಯೋಜನೆಯಡಿ ಬಿಸಿಯೂಟದ ಬದಲು ಆಹಾರ ಧಾನ್ಯಗಳನ್ನು ವಿತರಿಸುತ್ತಿರುವುದನ್ನು ಮುಂದುವರೆಸುವುದು.
- ಶಾಲಾ ಆವರಣದಲ್ಲಿ ವಿದ್ಯಾರ್ಥಿಗಳು ಊಟ ಮಾಡುವುದು ಸೂಕ್ತವಲ್ಲ.
- ಡಿಸೆಂಬರ್ 2020 ತಿಂಗಳಲ್ಲಿ ಎಸ್.ಡಿ.ಎಂ.ಸಿ / ಆಡಳಿತ ಮಂಡಳಿಗಳು ಸಂಬಂಧಿಸಿದ ಪೋಷಕರು ಮತ್ತು ಭಾಗೀದಾರರೊಂದಿಗೆ ಪೂರ್ವಭಾವಿ ಸಭೆ ನಡೆಸಿ ಶಾಲಾ ಪ್ರಾರಂಭ ಕುರಿತು ಕೈಗೊಂಡ ಪೂರ್ವ ತಯಾರಿಯನ್ನು ಮನವರಿಕೆ ಮಾಡುವುದು. ಶಾಲೆಗಳ ಪುನರಾರಂಭದ ಕುರಿತು ಧನಾತ್ಮಕ ಸಂದೇಶಗಳನ್ನು ವಿವಿಧ ಮಾಧ್ಯಮಗಳ ಮೂಲಕ ಬಿತ್ತರಿಸುವುದು.
- ಯಾವುದೇ ವಿದ್ಯಾರ್ಥಿ /ಶಿಕ್ಷಕ/ ಸಿಬ್ಬಂದಿಗೆ ಕೋವಿಡ್-19ರ ಲಕ್ಷಣಗಳು (ಅಂದರೆ ಕೆಮ್ಮು, ನೆಗಡಿ,ಜ್ವರ, ಶೀತ, ಗಂಟಲು ಕೆರೆತ, ರುಚಿ ಮತ್ತು ವಾಸನೆ ಗ್ರಹಿಸುವಲ್ಲಿ ತೊಂದರೆ, ಬೇಧಿ, ಉಸಿರಾಟದ ತೊಂದರೆ, ಇತರೆ) ಕಂಡು ಬಂದಲ್ಲಿ ತಕ್ಷಣವೇ ಪ್ರತ್ಯೇಕ ಕೊಠಡಿಯಲ್ಲಿ (Isolation Room)ಆಸನ ವ್ಯವಸ್ಥೆ ಮಾಡುವುದು ಮತ್ತು ಪೋಷಕರಿಗೆ ಪರೀಕ್ಷೆ ಮಾಡಿಸಲು ಸುಚಿಸುವುದು.
- ಯಾವುದೇ ವಿದ್ಯಾರ್ಥಿ / ಶಿಕ್ಷಕ/ ಸಿಬ್ಬಂದಿಗೆ ಕೋವಿಡ್ ಪಾಸಿಟಿವ್ ಎಂದು ಪರೀಕ್ಷೆ ಮೂಲಕ ದೃಢಪಟ್ಟಲ್ಲಿ ಅವರು ವೈದ್ಯಾಧಿಕಾರಿ / ವೈದ್ಯರ ಸಲಹೆಯಂತೆ ಚಿಕಿತ್ಸೆ ಪಡೆಯುವುದು.
- ಸೋಂಕು ತಗುಲದಂತೆ ಮುನ್ನೆಚ್ಚರಿಕಾ ಕ್ರಮಗಳಾಗಿ ಶಾಲಾ ಕಟ್ಟಡದ ಗೋಡೆ, ರೇಲಿಂಗ್ಸ್, ಲಿಫ್ಟ್, ಸ್ಟೇರ್ ಕೇಸ್, ವಾಹನಗಳು, ಪೀಠೋಪಕರಣಗಳು ಇತ್ಯಾದಿಗಳನ್ನು 1% ಸೋಡಿಯಂ ಹೈಪೋಕ್ಲೋರೈಟ್ ದ್ರಾವಣವನ್ನು ಸಿಂಪಡಿಸುವುದು ಮತ್ತು ಮರು ದಿನದಿಂದ ಇವುಗಳನ್ನು ಬಳಕೆ ಮಾಡುಬಹುದು. ಯಾವುದೇ ರೀತಿಯ ಸೀಲ್‌ಡೌನ್ ಅಗತ್ಯವಿರುವುದಿಲ್ಲ.
- ಕೋವಿಡ್-19 ಪಾಸಿಟೀವ್ ಹೊಂದಿದ ವಿದ್ಯಾರ್ಥಿಗಳು/ ಶಿಕ್ಷಕರು/ ಸಿಬ್ಬಂದಿ ಕರ್ನಾಟಕ ಸರ್ಕಾರದ ದಿನಾಂಕ: 11.08.2020ರ ಕೋವಿಡ್-19 ಸೋಂಕಿನ ರೋಗಿಗಳ ಪರಿಷ್ಕೃತ ಡಿಸ್ಚಾರ್ಜ ನಿಯಮಗಳನ್ನು ಪಾಲಿಸುವುದು.
- ಮನೆಯಲ್ಲಿಯೇ 10 ದಿನಗಳ ಪ್ರತ್ಯೇಕತೆ / ಮನೆಯ ಆರೈಕೆ / ಕೋವಿಡ್ ಆರೈಕೆ ಕೇಂದ್ರಗಳ ಮತ್ತು ವೈದ್ಯಕೀಯ ಮೇಲ್ವಿಚಾರಣೆಗೆ ಒಳಪಟ್ಟಿರುವಂತಹ ರೋಗಲಕ್ಷಣವಿಲ್ಲದ ಹಾಗೂ ಕಡಿಮೆ ರೋಗಲಕ್ಷಣವುಳ್ಳಂತಹ ವಿದ್ಯಾರ್ಥಿಗಳು / ಶಿಕ್ಷಕರು / ಸಿಬ್ಬಂದಿಯು ಮುಂದುವರೆದು 7 ದಿನಗಳ ಸ್ವಯಂ ಆರೈಕೆಯನ್ನು ಮನೆಯಲ್ಲಿಯೇ ನಡೆಸುವುದು. ಇವರುಗಳು ಮತ್ತೊಮ್ಮೆ ಕೋವಿಡ್-19ರ ಪರೀಕ್ಷೆಗೆ ಒಳಪಡುವ ಅಗತ್ಯವಿರುವುದಿಲ್ಲ, ಆದರೆ, ಅವರನ್ನು ಆರೈಕೆ ಮಾಡುತ್ತಿರುವ ವೈದ್ಯಾಧಿಕಾರಿಗಳು ಅಥವಾ ವೈದ್ಯರಿಂದ ಶಾಲೆಗೆ ಮರಳಲು ಸದೃಢರಾಗಿದ್ದಾರೆಂದು 17 ದಿನಗಳ ಕೊನೆಯಲ್ಲಿ ದೃಢೀಕರಣ ಪತ್ರ ಪಡೆದು ಸಲ್ಲಿಸುವುದು.

**ಇತರೆ ಸೂಚನೆಗಳು:-**

- ಎಲ್ಲ ಶಾಲೆಗಳ ಶಿಕ್ಷಕರು ಮತ್ತು ಸಿಬ್ಬಂದಿ ಶಾಲೆ ಪ್ರಾರಂಭವಾಗುವ ದಿನದ ಮುನ್ನ 72 ಗಂಟೆಗಳ ಅಂತರದಲ್ಲಿ ಕೋವಿಡ್-19ರ ಪರೀಕ್ಷೆ ಮಾಡಿಸಿ ನೆಗಟೀವ್ ವರದಿಯನ್ನು ಸಲ್ಲಿಸುವುದು. ಈ ಕುರಿತು ಆಯಾ ಜಿಲ್ಲೆಗಳ ಮುಖ್ಯ

ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಆರೋಗ್ಯಾಧಿಕಾರಿಗಳೊಂದಿಗೆ ಸಮನ್ವಯ ಸಾಧಿಸಿ ಅವಶ್ಯ ಕ್ರಮತೆಗೆದುಕೊಳ್ಳುವುದು.

- ಶಾಲೆಗೆ ಹಾಜರಾಗಲು ಬಯಸದೇ ಇರುವ ವಿದ್ಯಾರ್ಥಿಗಳಿಗೆ ಈಗ ಅನುಸರಿಸುತ್ತಿರುವ ಆನ್-ಲೈನ್/ಇತರೆ ಪರ್ಯಾಯ ವಿಧಾನವನ್ನು ಮುಂದುವರೆಸಿಕೊಂಡು ಹೋಗಬೇಕು/ಒದಗಿಸುವುದು.
- ಪ್ರತಿ ಶಾಲೆಯ ಮಕ್ಕಳನ್ನು ಥರ್ಮಾಲ್ ಸ್ಕ್ಯಾನರ್ ಮೂಲಕ ಪರೀಕ್ಷಿಸುವುದು.
- ಪ್ರತಿ ವಿದ್ಯಾರ್ಥಿ ಮಾಸ್ಕ್ ಧರಿಸುವುದು, ಹಾಗೂ ಭೌತಿಕ ಅಂತರವನ್ನು ಕಾಪಾಡಿಕೊಳ್ಳುವುದು ಕಡ್ಡಾಯ.
- ಎಸ್.ಓ.ಪಿ ಅನುಸಾರ ಶಾಲೆಗಳಲ್ಲಿ ಸ್ಯಾನಿಟೈಸರ್/ಸೋಪ್ ಇತರೆ ನೈರ್ಮಲೀಕರಣ ವ್ಯವಸ್ಥೆ ಮಾಡುವುದು.
- ಗ್ರಾಮೀಣ ವ್ಯಾಪ್ತಿಯಲ್ಲಿ ಗ್ರಾಮ ಪಂಚಾಯಿತಿವತಿಯಿಂದ ಹಾಗೂ ನಗರ ಪ್ರದೇಶಗಳಲ್ಲಿ ನಗರಸಭೆ/ಪುರ ಸಭೆವತಿಯಿಂದ ಸರ್ಕಾರಿ ಶಾಲೆಗಳ ಸ್ವಚ್ಛತೆ ಹಾಗೂ ಸ್ಯಾನಿಟೈಸೇಷನ್ ವ್ಯವಸ್ಥೆ ಮಾಡಿಸುವುದು.
- ವಿದ್ಯಾರ್ಥಿಗಳು ಮನೆಯಿಂದಲೇ ಕುಡಿಯುವ ನೀರನ್ನು ತರಲು ತಿಳಿಸಬಹುದು.
- ಶಾಲೆಗಳಲ್ಲಿ ಶುದ್ಧ ಕುಡಿಯುವ ನೀರು ಹಾಗೂ ಶೌಚಾಲಯಗಳ ನೈರ್ಮಲ್ಯದ ವ್ಯವಸ್ಥೆ ಮಾಡುವುದು.
- ಯಾವುದಾದರೂ ವಿದ್ಯಾರ್ಥಿ/ಸಿಬ್ಬಂದಿ ಕೋವಿಡ್-19 ಪಾಸಿಟಿವ್ ಕಂಡುಬಂದಲ್ಲಿ ತಕ್ಷಣ ಆರೋಗ್ಯ ಇಲಾಖೆಯನ್ನು ಸಂಪರ್ಕಿಸಿ ತುರ್ತು ಚಿಕಿತ್ಸೆಗೆ ವ್ಯವಸ್ಥೆ ಮಾಡುವುದು.

**10ನೇ ತರಗತಿ ವಿದ್ಯಾರ್ಥಿಗಳಿಗೆ ಶಾಲಾ ಪ್ರಾರಂಭ ವೇಳಾಪಟ್ಟಿ:-**

| ದಿನ | ಅವಧಿ | ಪ್ರಥಮ ಭಾಷೆ | ದ್ವಿತೀಯ ಭಾಷೆ | ತೃತೀಯ ಭಾಷೆ | ಗಣಿತ | ವಿಜ್ಞಾನ | ಸಮಾಜ ವಿಜ್ಞಾನ | ದೈಹಿಕ ಶಿಕ್ಷಣ | ಇತರೆ(ವೃತ್ತಿ/ಚಿತ್ರಕಲೆ ಇತ್ಯಾದಿ) |
|---|---|---|---|---|---|---|---|---|---|
| ಸೋಮವಾರ | 10.00-10.45 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 |
| | 10.45-11.30 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 |
| | 11.45-12.30 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 |
| ಮಂಗಳವಾರ | 10.00-10.45 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 |
| | 10.45-11.30 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 |
| | 11.45-12.30 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 |
| ಬುಧವಾರ | 10.00-10.45 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 |
| | 10.45-11.30 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 |
| | 11.45-12.30 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 |
| ಗುರುವಾರ | 10.00-10.45 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 |
| | 10.45-11.30 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 |
| | 11.45-12.30 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 |
| ಶುಕ್ರವಾರ | 10.00-10.45 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 |
| | 10.45-11.30 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 | ತಂಡ-3 |
| | 11.45-12.30 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 | ತಂಡ-2 |
| ಶನಿವಾರ | 10.00-10.45 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 | ತಂಡ-1 |
| | 10.45-11.30 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 | ತಂಡ-8 |
| | 11.45-12.30 | ತಂಡ-8 | ತಂಡ-1 | ತಂಡ-2 | ತಂಡ-3 | ತಂಡ-4 | ತಂಡ-5 | ತಂಡ-6 | ತಂಡ-7 |

ಈ ಮೇಲೆ ನೀಡಲಾಗಿರುವ ಸಲಹಾತ್ಮಕ ವೇಳಾ ಪಟ್ಟಿಯನ್ನು ಆಯಾ ಶಾಲೆಯಲ್ಲಿರುವ ಮಕ್ಕಳ ಸಂಖ್ಯೆ ಹಾಗೂ ಕೊಠಡಿ ಮತ್ತು ಸ್ಥಳಾವಕಾಶದ ಲಭ್ಯತೆಯನ್ನು ಆಧರಿಸಿ ಭೌತಿಕ ಅಂತರ ಕಾಪಾಡಿಕೊಂಡು ಬದಲಾವಣೆ ಮಾಡಲು ಅವಕಾಶವಿದೆ.

ಮೇಲ್ಕಂಡ ಮಾರ್ಗಸೂಚಿಗಳನ್ನು ಅನುಸರಿಸಿ ದಿನಾಂಕ: 01.01.2021 ರಿಂದ 10ನೇ ತರಗತಿಗೆ ಶಾಲಾ ಶೈಕ್ಷಣಿಕ ಚಟುವಟಿಕೆಗಳನ್ನು ಪುನರಾರಂಭಿಸಲು ಸೂಚಿಸಿದೆ.( ಇದರೊಂದಿಗೆ ಎಸ್.ಓ.ಪಿ ಯನ್ನು ಲಗತ್ತಿಸಿದೆ.)

ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ,
ಬೆಂಗಳೂರು

ಇವರಿಗೆ:-

01. ರಾಜ್ಯದ ಎಲ್ಲಾ ಉಪನಿರ್ದೇಶಕರು(ಆಡಳಿತ ಮತ್ತು ಅಭಿವೃದ್ಧಿ), ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ಕಳುಹಿಸುತ್ತಾ ಕ್ರಮವಹಿಸಲು ತಿಳಿಸಿದೆ.
02. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರಿಗೆ ಉಪನಿರ್ದೇಶಕರು (ಆಡಳಿತ ಮತ್ತು ಅಭಿವೃದ್ಧಿ),ರವರ ಮೂಲಕ ಮುಂದಿನ ಕ್ರಮಕ್ಕಾಗಿ,

ಪ್ರತಿಯನ್ನು:

01. ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು ರವರಿಗೆ ಗೌರವಗಳೊಂದಿಗೆ ಮಾಹಿತಿಗಾಗಿ ಸಲ್ಲಿಸಿದೆ.
02. ಮಾನ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ರವರಿಗೆ ಗೌರವಗಳೊಂದಿಗೆ ಮಾಹಿತಿಗಾಗಿ ಸಲ್ಲಿಸಿದೆ.
03. ಮಾನ್ಯ ರಾಜ್ಯ ಯೋಜನಾ ನಿರ್ದೇಶಕರು ಎಸ್.ಎಸ್.ಕೆ/ಆರ್.ಎಂ.ಎಸ್.ಎ ನೃಪತುಂಗ ರಸ್ತೆ, ಬೆಂಗಳೂರು ರವರಿಗೆ ಮಾಹಿತಿಗಾಗಿ
04. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಿಗೆ ಮಾಹಿತಿಗಾಗಿ ಹಾಗೂ ಕ್ರಮಕ್ಕಾಗಿ
05. ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು ರವರಿಗೆ ಮಾಹಿತಿಗಾಗಿ
06. ಆಯುಕ್ತರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರಿಗೆ ಮಾಹಿತಿಗಾಗಿ
07. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು ರವರಿಗೆ ಮಾಹಿತಿಗಾಗಿ
08. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ರವರಿಗೆ ಮಾಹಿತಿಗಾಗಿ
09. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ರವರಿಗೆ ಮಾಹಿತಿಗಾಗಿ
10. ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ರವರಿಗೆ ಮಾಹಿತಿಗಾಗಿ
11. ಆಯುಕ್ತರು, ಸಾರಿಗೆ ಇಲಾಖೆ, ಬೆಂಗಳೂರು ರವರಿಗೆ ಮಾಹಿತಿಗಾಗಿ
12. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ / ಕಲಬುರಗಿ ರವರಿಗೆ ಸೂಕ್ತ ಕ್ರಮಕ್ಕಾಗಿ
13. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ನಿರ್ದೇಶಕಕರುಗಳಿಗೆ ಮಾಹಿತಿಗಾಗಿ ಹಾಗೂ ಕ್ರಮಕ್ಕಾಗಿ
14. ಸಹ ನಿರ್ದೇಶಕರು ಮಧ್ಯಾಹ್ನ ಉಪಹಾರ ಯೋಜನೆ ಬೆಂಗಳೂರು ರವರಿಗೆ. ಮಾಹಿತಿಗಾಗಿ ಹಾಗೂ ಕ್ರಮಕ್ಕಾಗಿ
15. ಕಛೇರಿ ಪ್ರತಿ

c:\users\work\desktop\vidya gama suthoule.docx

ಅನುಬಂಧ-02



ಕರ್ನಾಟಕ ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು–560001.

ಸಂಖ್ಯೆ :ಎಡಿಎಂ.2.ಸಿಪಿಐ.ಬಿಎಂ.49 ಇಪಿ 2020–21 ದಿನಾಂಕ:22.10.2020

## ಸುತ್ತೋಲೆ

ವಿಷಯ: ಆನ್‌ಲೈನ್ ತರಗತಿಗಳನ್ನು ವೈಜ್ಞಾನಿಕವಾಗಿ ನಡೆಸುವ ಬಗ್ಗೆ.
ಉಲ್ಲೇಖ: 1. ಸರ್ಕಾರದ ಆದೇಶ ಸಂಖ್ಯೆ: ಇಪಿ 139 ಪಿಜಿಸಿ 2020. ದಿನಾಂಕ:27.06.2020.
2. ಮಾಧ್ಯಮ ಹಾಗೂ ಪತ್ರಿಕೆಗಳ ವರದಿ

* * * * *

ಕೋವಿಡ್–19ರ ಹಿನ್ನೆಲೆಯಲಿ ರಾಜ್ಯದಲ್ಲಿನ ಶಾಲೆಗಳಿಗೆ ರಜೆ ಘೋಷಿಸಿದ್ದರಿಂದ ಹಾಗೂ ಕೇಂದ್ರ ಸರ್ಕಾರವು ಲಾಕ್‌ಡೌನ್ ಜಾರಿಗೊಳಿಸಿದ ಹಿನ್ನೆಲೆಯಲ್ಲಿ ಶೈಕ್ಷಣಿಕ ವರ್ಷ ಪ್ರಾರಂಭವಾದರೂ ಶಾಲೆಗಳನ್ನು ಭೌತಿಕವಾಗಿ ತೆರೆಯಲು ಸಾಧ್ಯವಾಗಿರುವುದಿಲ್ಲ. ರಾಜ್ಯದ ಹಲವಾರು ಖಾಸಗಿ ಶಾಲೆಗಳು ಆನ್‌ಲೈನ್ ತರಗತಿಗಳ ಮೂಲಕ ಮಕ್ಕಳಿಗೆ ಪಾಠ ಪ್ರವಚನ ಮಾಡಲು ಕ್ರಮ ಕೈಗೊಂಡಿದ್ದವು ಹಾಗೂ ಈ ಸಂಬಂಧ ಪೋಷಕರಿಂದ ಹೆಚ್ಚುವರಿ ಶುಲ್ಕವನ್ನು ಪಾವತಿಸುವಂತೆ ಒತ್ತಡ ತರುತ್ತಿದ್ದವು. ಈ ಬಗ್ಗೆ ಅನೇಕ ಪೋಷಕರು ಸರ್ಕಾರ/ಇಲಾಖೆಗೆ ದೂರುಗಳನ್ನು ಸಲ್ಲಿಸಿದ ಹಿನ್ನೆಲೆಯಲ್ಲಿ ಆನ್ ಲೈನ್ ಶಿಕ್ಷಣಕ್ಕೆ ಹೆಚ್ಚುವರಿ ಶುಲ್ಕವನ್ನು ಪೋಷಕರಿಂದ ಪಡೆಯದೇ ಆನ್‌ಲೈನ್ ಶಿಕ್ಷಣ ನೀಡಲು ದಿನಾಂಕ:17.04.2020ರಂದು ಆದೇಶ ನೀಡಲಾಗಿದೆ.

ಖಾಸಗಿ ಶಾಲೆಗಳು ಆನ್‌ಲೈನ್ ಶಿಕ್ಷಣ ನೀಡುತ್ತಿರುವುದರಿಂದ ಆನ್‌ಲೈನ್ ಶಿಕ್ಷಣ ಪಡೆದುಕೊಳ್ಳಲು ಮಕ್ಕಳಿಗೆ ಅಗತ್ಯ ಮೊಬೈಲ್ ಹಾಗೂ ಇನ್ನಿತರ ಸಾಧನಗಳನ್ನು ಪೋಷಕರು ಕೊಡಿಸುವ ಸಾಮರ್ಥ್ಯ ಇಲ್ಲದಿರುವ ಬಗ್ಗೆ ಹಾಗೂ ಎಲ್.ಕೆ.ಜಿ ಯಿಂದ 5ನೇ ತರಗತಿಯವರೆಗಿನ ಮಕ್ಕಳು ಆನ್‌ಲೈನ್ ತರಗತಿಗೆ ಭಾಗವಹಿಸಲು ತೊಂದರೆಯಾಗುತ್ತಿರುವ ಬಗ್ಗೆ ಪೋಷಕರಿಂದ ಬಂದ ದೂರುಗಳು ಮತ್ತು ಮಕ್ಕಳಿಗೆ ಆರೋಗ್ಯ ಸಮಸ್ಯೆಗಳು ಉಂಟಾಗುತ್ತಿರುವ ಬಗ್ಗೆ ಆಕ್ಷೇಪಣೆಗಳು ಮಾಧ್ಯಮದಲ್ಲಿ ಬಂದ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರವು ದಿನಾಂಕ:15.06.2020ರಂದು ತಜ್ಞರ ಸಮಿತಿಯನ್ನು ರಚಿಸಿ ವರದಿ ನೀಡುವಂತೆ ಆದೇಶಿಸಿರುತ್ತದೆ. ಈ ಮಧ್ಯೆ ಇಲಾಖೆಯು ದಿನಾಂಕ:17.06.2020ರಂದು ಸರ್ಕಾರದ ಆದೇಶದಂತೆ ಎಲ್.ಕೆ.ಜಿ. ಯು.ಕೆ.ಜಿ ಯಿಂದ 5ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣವನ್ನು ರದ್ದುಪಡಿಸಿತ್ತು. ಹಾಗೂ ದಿನಾಂಕ:15.06.2020ರಂದು ರಚಿಸಿರುವ ತಜ್ಞರ ಸಮಿತಿ ವರದಿ ಬರುವವರೆಗೆ ಆನ್‌ಲೈನ್ ಶಿಕ್ಷಣಕ್ಕೆ [ಪೂರ್ವ ಪ್ರಾಥಮಿಕ ದಿಂದ 10ನೇ ತರಗತಿವರೆಗೆ] ತರಗತಿವಾರು ಅವಧಿಯವನ್ನು ನಿಗಧಿಪಡಿಸಿ, ಸರ್ಕಾರವು ದಿನಾಂಕ:27.06.2020ರಂದು ಆದೇಶವನ್ನು ಹೊರಡಿಸಿದೆ.

ಇಲಾಖೆಯು ದಿನಾಂಕ:17.06.2020 ರಂದು ಹೊರಡಿಸಿದ ಆದೇಶವನ್ನು ಪ್ರಶ್ನಿಸಿ ಖಾಸಗಿ ಶಾಲೆಗಳ ಶಿಕ್ಷಣ ಸಂಸ್ಥೆಗಳು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ (ರಿಟ್ ಅರ್ಜಿ ಸಂಖ್ಯೆ:8168/2020) ದಾವೆ ಸಲ್ಲಿಸಿದ್ದವು. ಸದರಿ ದಾವೆಯ ಬಗ್ಗೆ ರಾಜ್ಯ ಮಾನ್ಯ ಉಚ್ಚ ನ್ಯಾಯಾಲಯವು ವಿಚಾರಣೆ ನಡೆಸಿ, ಸರ್ಕಾರ ಹಾಗೂ ಇಲಾಖೆಯು ದಿನಾಂಕ:17.06.2020 ಮತ್ತು ದಿನಾಂಕ:27.06.2020ರಂದು ಹೊರಡಿಸಿರುವ ಆದೇಶಗಳಿಗೆ ದಿನಾಂಕ:08.07.2020ರಂದು ಮಧ್ಯಂತರ ಆದೇಶದ ಮೂಲಕ ತಡೆಯಾಜ್ಞೆ ನೀಡಿರುತ್ತದೆ.

ಮಾನ್ಯ ಉಚ್ಚ ನ್ಯಾಯಾಲಯವು ತಡೆಯಾಜ್ಞೆ ನೀಡಿದ ಹಿನ್ನೆಲೆಯಲ್ಲಿ ಆನ್‌ಲೈನ್ ಶಿಕ್ಷಣವನ್ನು ಯಥಾವತ್ತಾಗಿ ಮುಂದುವರೆಸಿಕೊಂಡು ಹೋಗಲು ಅವಕಾಶ ನೀಡಿದಂತಾಗಿದೆ.

ರಾಜ್ಯ ಸರ್ಕಾರವು ಆನ್‌ಲೈನ್ ತರಗತಿಗಳನ್ನು ವೈಜ್ಞಾನಿಕವಾಗಿ ನಡೆಸುವ ಬಗ್ಗೆ ನೇಮಿಸಿದ ತಜ್ಞರ ಸಮಿತಿಯು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಸದರಿ ವರದಿಯಲ್ಲಿ ಪೂರ್ವ ಪ್ರಾಥಮಿಕದಿಂದ 10ನೇ ತರಗತಿವರೆಗೆ ಈ ಕೆಳಕಂಡಂತೆ ಬೋಧನಾ ಅವಧಿ ಮಾದರಿಯನ್ನು ನಿಗಧಿಪಡಿಸಿ ಆನ್‌ಲೈನ್ ತರಗತಿಯನ್ನು ನಡೆಸಬಹುದೆಂದು ಶಿಫಾರಸ್ಸು ಮಾಡಿರುತ್ತದೆ.

| Dimension | 3-6 years (Pre-Primary) | 1-2 grades | 3-5 grades | 6-8 grades | 9-10 grades |
|---|---|---|---|---|---|
| Screen time per session (in minutes / (Maximum) | 30 | 30 | 30 | 30 to 45 | 30 to 45 |
| Maximum sessions per day | 1 | 2 | 2 | 3 | 4 |
| Frequency / week | 3 days | 3 days | 5 days | 5 days | 5 days |
| Presence of parents / adult supervisor with the consent of the parents | Mandatory | Mandatory | Preferable | Optional | |
| Asynchronous(live or recorded ) Synchronous (live or recorded | A judicious mix Synchronous and Asynchronous mode as per requirement | | | | |
| Interactive (Active) or Practice | Interactive | Interactive | Preferably/ Interactive | Preferably/ Interactive | Preferably/ Interactive |
| Content | Play, story and rhymes and other innovative activities Only | Play, story and rhymes and other innovative activities Only | 25: (Curricular) 75: (General /Curricular) | 50: (Curricular) 50: (General/ Curricular) | 75: (Curricular) 25: (General/ Curricular) |

ಸದರಿ ವರದಿಯ ಶಿಫಾರಸ್ಸು ಹಾಗೂ ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಡಿಜಿಟಲ್ ಬೋಧನಾ ಮಾರ್ಗಸೂಚಿಯನ್ವಯ ರಾಜ್ಯದ ಎಲ್ಲಾ ಮಕ್ಕಳಿಗೆ ನಿರಂತರ ಕಲಿಕೆಯನ್ನು ಉಂಟುಮಾಡಲು ವಿದ್ಯಾಗಮ ಹಾಗೂ ಸಂವೇದ ಕಾರ್ಯಕ್ರಮದಂತೆ ಬೋಧಿಸಲು ಅವಕಾಶ ಕಲ್ಪಿಸಲಾಗಿದೆ.

ಇತ್ತೀಚಿನ ಮಾಧ್ಯಮಗಳು ಹಾಗೂ ಪತ್ರಿಕೆಗಳಲ್ಲಿ ಪ್ರಕಟವಾದ ವರದಿಯಲ್ಲಿ ಖಾಸಗಿ ಶಾಲೆಗಳು ಆನ್‌ಲೈನ್ ಶಿಕ್ಷಣವನ್ನು ಸರ್ಕಾರದ / ಇಲಾಖೆಯ ಮಾರ್ಗಸೂಚಿಯಂತೆ ಪಾಲಿಸದೇ ಹೆಚ್ಚಿನ ಅವಧಿ

ಬೋಧನೆ ಮಾಡುತ್ತಿರುವುದರಿಂದ ಮಕ್ಕಳ ಆರೋಗ್ಯ ಹಾಗೂ ಕಣ್ಣುಗಳ ಮೇಲೆ ದುಷ್ಪರಿಣಾಮ ಬೀರುತ್ತಿದೆ ಎಂದು ವರದಿಯಾಗಿರುತ್ತದೆ.

ಆದ್ದರಿಂದ ಆನ್‌ಲೈನ್ ತರಗತಿಗಳನ್ನು ಬೋಧಿಸುತ್ತಿರುವ ಎಲ್ಲಾ ಶಾಲೆಗಳು ಕಡ್ಡಾಯವಾಗಿ ತಜ್ಞರ ಸಮಿತಿ ನೀಡಿರುವ ವರದಿಯಲ್ಲಿನ ಶಿಫಾರಸ್ಸಿನಂತೆ ನಿಗಧಿಪಡಿಸಿರುವ ಅವಧಿಗೆ ತಕ್ಕಂತೆ ಬೋಧನೆ ಮಾಡಲು ಆದೇಶಿಸಿದೆ. ಮೇಲಿನ ಮಾರ್ಗಸೂಚಿಗಿಂತ ಯಾವುದೇ ಕಾರಣಕ್ಕೂ ಹೆಚ್ಚಿನ ಅವಧಿ ಆನ್‌ಲೈನ್ ತರಗತಿಗಳನ್ನು ನಡೆಸದಂತೆ ಈ ಮೂಲಕ ಸೂಚಿಸಲಾಗಿದೆ. ಒಂದು ವೇಳೆ ಮಾರ್ಗಸೂಚಿಗಳನ್ನು ಉಲ್ಲಂಘಿಸಿದಲ್ಲಿ ಅಂತಹ ಶಿಕ್ಷಣ ಸಂಸ್ಥೆಗಳ ವಿರುದ್ಧ ಕರ್ನಾಟಕ ಶಿಕ್ಷಣ ಕಾಯಿದೆ-1983 (1995)ರ ಸೆಕ್ಷನ್ 124(ಎ)ರ ಅಡಿಯಲ್ಲಿ ಕ್ರಮ ಜರುಗಿಸಲಾಗುವುದು.

ಆಯುಕ್ತರು,
ಸಾರ್ವಜನಿಕ ಶಿಕ್ಷಣ ಇಲಾಖೆ.

ಗೆ,

1] ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಮತ್ತು ಕಲಬುರ್ಗಿ ವಿಭಾಗ.
2] ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ನಿರ್ದೇಶಕರುಗಳಿಗೆ ಅಗತ್ಯ ಕ್ರಮಕ್ಕಾಗಿ.
3] ರಾಜ್ಯದ ಎಲ್ಲಾ ವಿಭಾಗೀಯ ಸಹನಿರ್ದೇಶಕರುಗಳಿಗೆ ಅಗತ್ಯ ಕ್ರಮಕ್ಕಾಗಿ
4] ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳಿಗೆ ಅಗತ್ಯ ಕ್ರಮಕ್ಕಾಗಿ
5] ರಾಜ್ಯದ ಎಲ್ಲಾ ಕ್ಷೇತ್ರಶಿಕ್ಷಣಾಧಿಕಾರಿಗಳಿಗೆ (ಇವರು ಎಲ್ಲಾ ಖಾಸಗಿ ಅನುದಾನರಹಿತ ಆಡಳಿತ ಮಂಡಳಿ ಹಾಗೂ ಅನುದಾನರಹಿತ ಶಾಲಾ ಮುಖ್ಯಸ್ಥರುಗಳಿಗೆ ಸುತ್ತೋಲೆಯನ್ನು ತಲುಪಿಸುವುದು)

**ಪ್ರತಿಯನ್ನು ಮಾಹಿತಿಗಾಗಿ**

1. ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳಿಗೆ ಕಳುಹಿಸುತ್ತಾ ಸದರಿ ವಿಷಯವನ್ನು ಮಾನ್ಯ ಸಚಿವರ ಅವಗಾಹನೆಗೆ ತರುವಂತೆ ಕೋರಿದೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ, ಬೆಂಗಳೂರು.
3. ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ-ಕರ್ನಾಟಕ, ಬೆಂಗಳೂರು.
4. ಹಿರಿಯ ಸಹಾಯಕ ನಿರ್ದೇಶಕರು, ಇ-ಆಡಳಿತ ಶಾಖೆ, ಆಯುಕ್ತರ ಕಛೇರಿ, ಬೆಂಗಳೂರು ಇವರಿಗೆ ವೆಬ್‌ಸೈಟ್‌ನಲ್ಲಿ ಪ್ರಕಟಿಸುವುದಕ್ಕಾಗಿ.
5. ಕಛೇರಿ ಪ್ರತಿ.

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ**: 2020-21ನೇ ಸಾಲಿನಲ್ಲಿ ಖಾಸಗಿ ಅನುದಾನ ರಹಿತ ಶಾಲೆಗಳು ಶಾಲಾ ಶುಲ್ಕಗಳನ್ನು ವಿದ್ಯಾರ್ಥಿಗಳ ಪೋಷಕರಿಂದ ಪಡೆಯುವ ಬಗ್ಗೆ-ಆದೇಶ.

**ಓದಲಾಗಿದೆ**: **1)** ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 76 ಪಿಜಿಸಿ 2020, ದಿನಾಂಕ:19-06-2020.

**2)** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಸುತ್ತೋಲೆ ಸಂಖ್ಯೆ:ಸಿ7(2)ಪ್ರಾಶಿಅ:ಶುಲ್ಕ:30:2020-21, ದಿನಾಂಕ:05-09-2020

**3)** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಏಕ ಕಡತ ಸಂಖ್ಯೆ: ಸಿ7(2)ಪ್ರಾಶಿಅ:ಶುಲ್ಕ:30:2020-21(ಭಾಗ-2), ದಿನಾಂಕ:19-01-2021.

***

**ಪ್ರಸ್ತಾವನೆ:**

ಕೋವಿಡ್-19ರ ಹಿನ್ನೆಲೆಯಲ್ಲಿ ಶಾಲೆಗಳು ಭೌತಿಕವಾಗಿ ಪ್ರಾರಂಭವಾಗಿರುವುದಿಲ್ಲವಾದುದರಿಂದ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಸರ್ಕಾರಿ / ಅನುದಾನಿತ ಶಾಲೆಗಳಲ್ಲಿ ವಿದ್ಯಾಗಮ ಮತ್ತು ಸಂವೇದನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ ಮತ್ತು ಖಾಸಗಿ ಅನುದಾನ ರಹಿತ ಶಾಲೆಗಳಲ್ಲಿ ಆನ್‌ಲೈನ್ ಶಿಕ್ಷಣವನ್ನು ನಡೆಸಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ(1)ರ ಸುತ್ತೋಲೆಯಲ್ಲಿ 2020-21ನೇ ಶೈಕ್ಷಣಿಕ ಸಾಲಿನಲ್ಲಿ ಖಾಸಗಿ ಅನುದಾನ ರಹಿತ ಶಾಲೆಗಳು ಯಾವುದೇ ಬೋಧನಾ ಶುಲ್ಕವನ್ನು ಹೆಚ್ಚಿಸಬಾರದೆಂಬುದಾಗಿ ಕರ್ನಾಟಕ ಶಿಕ್ಷಣ ಕಾಯ್ದೆ 1983 ಸೆಕ್ಷನ್ 133 (2)ರಲ್ಲಿ ನೀಡಿರುವ ಅಧಿಕಾರವನ್ನು ಪರಿಗಣಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (2)ರ ಸುತ್ತೋಲೆಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ಅನುದಾನರಹಿತ ಶಾಲೆಗಳಲ್ಲಿ 2020-21ನೇ ಸಾಲಿಗೆ ಅಧಿಕೃತ ಶುಲ್ಕದ ಮೊದಲನೆ ಕಂತನ್ನು ವಿದ್ಯಾರ್ಥಿಗಳ ಪೋಷಕರಿಂದ ಪಡೆಯಲು ಅನುಮತಿ ನೀಡಿರುತ್ತಾರೆ.

ಕೋವಿಡ್-19ರ ಹಿನ್ನೆಲೆಯಲ್ಲಿ ಅನುದಾನರಹಿತ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಪೋಷಕರುಗಳು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿರುವುದರಿಂದ ಪ್ರಸ್ತುತ 2020-21ನೇ ಶೈಕ್ಷಣಿಕ ಸಾಲಿನ ಶುಲ್ಕವನ್ನು ಪೂರ್ಣ ಪ್ರಮಾಣದಲ್ಲಿ ಪಾವತಿಸಲು ಸಾಧ್ಯವಿಲ್ಲವೆಂದು ಹಲವಾರು ಮನವಿಗಳನ್ನು ಸಲ್ಲಿಸಿರುತ್ತಾರೆ.

ಖಾಸಗಿ ಅನುದಾನ ರಹಿತ ಶಾಲಾ ಆಡಳಿತ ಮಂಡಳಿಗಳು ಮತ್ತು ಆಡಳಿತ ಮಂಡಳಿಯ ಒಕ್ಕೂಟಗಳು ಮನವಿಗಳನ್ನು ಸಲ್ಲಿಸಿ 2020-21ನೇ ಸಾಲಿನ ಶೈಕ್ಷಣಿಕ ಸಾಲಿನಲ್ಲಿ ಪೋಷಕರು ವಿದ್ಯಾರ್ಥಿಗಳ ಶುಲ್ಕವನ್ನು ಪಾವತಿಸುತ್ತಿಲ್ಲವಾದ್ದರಿಂದ ಶಾಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕ ಮತ್ತು ಶಿಕ್ಷಕೇತರ ಸಿಬ್ಬಂದಿಗಳ ವೇತನವನ್ನು ಹಾಗೂ ಪಿಎಫ್, ಇ.ಎಸ್.ಐ ಮತ್ತು ಇತರೆ ತೆರಿಗೆಗಳನ್ನು ಸಹಾ ಪಾವತಿಸಬೇಕಾಗಿರುವುದರಿಂದ ವಿದ್ಯಾರ್ಥಿಗಳಿಂದ ಶುಲ್ಕ ಪಡೆಯಲು ಮಾಡಲು ಅನುಮತಿ ನೀಡುವಂತೆ ಕೋರಿರುತ್ತಾರೆ.

30/1

ಪೋಷಕರು, ಪೋಷಕ ಸಂಘಟನೆಗಳು, ಆಡಳಿತ ಮಂಡಳಿಗಳು, ಆಡಳಿತ ಮಂಡಳಿಗಳ ಸಂಘಟನೆಗಳು ನೀಡಿರುವ ಮನವಿಯ ಆಧಾರದ ಮೇಲೆ ಸಂಘಟನೆಗಳ ಸದಸ್ಯರುಗಳ ಸಭೆಯನ್ನು ಸರ್ಕಾರ ಹಾಗೂ ಇಲಾಖಾ ಮಟ್ಟದಲ್ಲಿ ಪ್ರತ್ಯೇಕವಾಗಿ ಆಯೋಜಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ನಂತರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:15-01-2021ರಂದು ವಿವಿಧ ಆಡಳಿತ ಮಂಡಳಿಗಳ ಒಕ್ಕೂಟಗಳು ಮತ್ತು ಪೋಷಕ ಸಂಘಟನೆಗಳ ಒಕ್ಕೂಟಗಳೊಂದಿಗೆ ಜಂಟಿಯಾಗಿ ಸಭೆಯನ್ನು ಆಯೋಜಿಸಿ, ಅಭಿಪ್ರಾಯಗಳನ್ನು ಸಂಗ್ರಹಿಸಿರುತ್ತಾರೆ. ಪೋಷಕರ ಸಂಘಟನೆಗಳು ಗರಿಷ್ಠ ಶುಲ್ಕವನ್ನು ಕಡಿತಗೊಳಿಸಬೇಕೆಂದು ಕೋರಿರುತ್ತಾರೆ. ಬಹುತೇಕ ಆಡಳಿತ ಮಂಡಳಿಗಳು ಸಹಾ ಶೇಕಡ 25 ರಷ್ಟು ಶುಲ್ಕ ವಿನಾಯಿತಿ ನೀಡಲು ಒಪ್ಪಿಗೆ ಸೂಚಿಸಿರುತ್ತಾರೆ.

ಮೇಲೆ ಓದಲಾದ (3)ರ ವರದಿಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆಯವರು ಮೇಲಿನ ಎಲ್ಲಾ ಬೆಳವಣಿಗೆಗಳನ್ನು ನಮೂದಿಸಿ ಸರ್ಕಾರದಿಂದ ಮುಂದಿನ ಆದೇಶ ಕೋರಿರುತ್ತಾರೆ.

ಕರ್ನಾಟಕ ಶಿಕ್ಷಣ ಕಾಯ್ದೆ-1983 ಸೆಕ್ಷನ್-133ರ ಉಪ ನಿಯಮ (2) ರಲ್ಲಿ ಈ ಕೆಳಕಂಡಂತೆ ಅಧಿಕಾರವನ್ನು ಪ್ರತ್ಯಾಯೋಜಿಸಿದೆ.

"The state Government may give such directions to any educational institution or tutorial institution as in its opinion are necessary or expedient for carrying out the purposes of this Act or to give effect to any of the provisions contained therin or of any rules or orders made thereunder and the Governing council or the owner, as the case may be, of such institution shall comply with every such direction"

ಜೊತೆಗೆ ಕರ್ನಾಟಕ ಶಿಕ್ಷಣ ಕಾಯ್ದೆ 1983 ಸೆಕ್ಷನ್-48 ರಡಿಯಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳು ವಿಧಿಸುವ ಶುಲ್ಕಗಳ ಬಗ್ಗೆ ನಿರ್ದೇಶನ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಉದ್ಧೃತ ಭಾಗವು ಈ ಕೆಳಕಂಡಂತಿರುತ್ತದೆ

"Subject to any other law for the time being in force, no Governing Council of a recognized educational institution shall levy or collect any fees or change or donations or other payments by whatever name called, save such and at such rate in such manner as may be prescribed.

The amounts levied or collected, under sub-section [1] shall be utilized by the educational institution in accordance with such rules as may be prescribed.

ಕರ್ನಾಟಕ ಶಿಕ್ಷಣ ಕಾಯ್ದೆ 1983 [ಎರಡನೇ ತಿದ್ದುಪಡಿ] ಕಾಯ್ದೆ 2017ರ ಮೂಲಕ ಸದರಿ ಕಾಯ್ದೆಯ ಸೆಕ್ಷನ್ 48ರಲ್ಲಿನ ಸರ್ಕಾರದ ಅಧಿಕಾರ ವ್ಯಾಪ್ತಿಯನ್ನು ಐ.ಸಿ.ಎಸ್.ಇ ಮತ್ತು ಸಿ.ಬಿ.ಎಸ್.ಇ ಶಾಲೆಗಳಿಗೂ ವಿಸ್ತರಿಸಲಾಗಿದೆ. ತಿದ್ದುಪಡಿ ಕಾಯ್ದೆಯ ಮೂಲಕ ಜಾರಿಗೆ ಬಂದ ನೂತನ ಕಲಂ (1)(3)(iii-ಎ)ರ ಪಾಠ ಕೆಳಗಿನಂತಿದೆ.

"Educational Institutions affiliated to or recognized by the Council of Indian Certificated Examination or Central Board of Secondary Education respectively but subject to condition that the provisions of Section 5-A, 48, 112-A and 124-A of this Act shall continue to apply to these institutions.

ಕೋವಿಡ್-19ರ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಸಂಭವಿಸಿರುವ ಮೇಲ್ಕಂಡ ಬೆಳವಣಿಗೆಗಳು ಹಾಗೂ ಈ ಸಂಬಂಧ ರಾಜ್ಯದ ವಿವಿಧ ವಲಯಗಳು ಹಾಗೂ ವರ್ಗಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ಸಹ ಸರ್ಕಾರ ಗಮನಿಸಿದೆ. ಸರ್ಕಾರದ ಅಧಿಕಾರ/ಜವಾಬ್ದಾರಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಪಿ 33 ಪಿಜಿಸಿ 2021, ಬೆಂಗಳೂರು ದಿನಾಂಕ:29 -01-2021**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳು ಹಾಗೂ ಕೋವಿಡ್-19ರ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಸಗಿ ಅನುದಾನರಹಿತ ಶಾಲೆಗಳಲ್ಲಿ 2020-21ನೇ ಶೈಕ್ಷಣಿಕ ಸಾಲಿಗೆ ಮಾತ್ರ ಅನ್ವಯವಾಗುವಂತೆ [ರಾಜ್ಯ ಪಠ್ಯಕ್ರಮ,ಸಿ.ಬಿ.ಎಸ್.ಇ, ಐ.ಸಿ.ಎಸ್.ಇ ಮತ್ತು ಇತರೆ ಪಠ್ಯಕ್ರಮದ ಶಾಲೆಗಳು ಸೇರಿದಂತೆ] ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಪೋಷಕರಿಂದ 2019-20ನೇ ಶೈಕ್ಷಣಿಕ ಸಾಲಿನಲ್ಲಿ ಪಡೆದ ಬೋಧನಾ ಶುಲ್ಕ **[TUTION FEES]** ದಲ್ಲಿ ಶೇಕಡ 70ರಷ್ಟನ್ನು ಮಾತ್ರ ಪಡೆಯಲು ಅನುಮತಿ ನೀಡಲಾಗಿದೆ.

ಉಳಿದಂತೆ ಶಾಲಾ ಅಭಿವೃದ್ಧಿ ಶುಲ್ಕ, ಐಚ್ಛಿಕ ಶುಲ್ಕಗಳು ಸೇರಿದಂತೆ ಉಳಿದ ಯಾವುದೇ ಶುಲ್ಕ ಹಾಗೂ ಟ್ರಸ್ಟ್, ಸೊಸೈಟಿಗಳಿಗೆ ವಂತಿಗೆ ಸ್ವೀಕರಿಸದಂತೆ ಖಾಸಗಿ ಶಾಲಾ ಆಡಳಿತ ಮಂಡಳಿಗಳನ್ನು ನಿರ್ಬಂಧಿಸಿ ಈ ಕೆಳಕಂಡ ಷರತ್ತುಗಳೊಂದಿಗೆ ಆದೇಶಿಸಲಾಗಿದೆ.

**ಷರತ್ತುಗಳು:**

1) ಈಗಾಗಲೇ ಪೂರ್ಣ ಶುಲ್ಕ ಪಾವತಿಸಿದ್ದಲ್ಲಿ ಹೆಚ್ಚುವರಿ ಶುಲ್ಕವನ್ನು ಪೋಷಕರಿಗೆ ಹಿಂತಿರುಗಿಸುವುದು ಅಥವಾ 2021-22ನೇ ಸಾಲಿನ ಶೈಕ್ಷಣಿಕ ವರ್ಷದ ಶುಲ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳುವುದು.
2) 2020-21ನೇ ಶೈಕ್ಷಣಿಕ ವರ್ಷದಲ್ಲಿ ಮೇಲೆ ನಿಗಧಿಪಡಿಸಿದ ಶುಲ್ಕಕ್ಕಿಂತ ಕಡಿಮೆ ಮಾಡಲು ಆಡಳಿತ ಮಂಡಳಿಗಳು ಇಚ್ಛಿಸಿದ್ದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಹೊಂದಿರುತ್ತಾರೆ.
3) ಪೋಷಕರಿಗೆ ಕನಿಷ್ಠ ಎರಡು ಕಂತುಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸಿ ಕೊಡುವುದು.

ಶುಲ್ಕಗಳ ತಕರಾರುಗಳು ಇದ್ದಲ್ಲಿ , ಅವುಗಳನ್ನು ಪರಿಹರಿಸಲು ಬೆಂಗಳೂರು ನಗರಕ್ಕೆ ವಲಯವಾರು ಇಲಾಖಾ ನಿರ್ದೇಶಕರುಗಳನ್ನು ಹಾಗೂ ಜಿಲ್ಲಾ ಹಂತಗಳಲ್ಲಿ ಡಯಟ್ ಪ್ರಾಂಶುಪಾಲರು ಸೇರಿದಂತೆ ಹಿರಿಯ ಅಧಿಕಾರಿಗಳನ್ನು ಅಧ್ಯಕ್ಷರನ್ನಾಗಿಸಿ ಅಧಿಕಾರಯುಕ್ತ ಸಮಿತಿಗಳನ್ನು ರಚಿಸಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸೂಕ್ತ ಆದೇಶ ಹೊರಡಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಹಾಗೂ ಅವರ ಹೆಸರಿನಲ್ಲಿ

ಹೆಚ್. ಎಸ್. [signature]

(ಹೆಚ್.ಎಸ್. ಶಿವಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ.

ಇವರಿಗೆ,

1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
2. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರಗಿ/ಧಾರವಾಡ.
3. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಎಲ್ಲಾ ನಿರ್ದೇಶಕರುಗಳಿಗೆ.

4. ರಾಜ್ಯದ ಎಲ್ಲಾ ಉಪನಿರ್ದೇಶಕರು(ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ.
5. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ.
6. ಕ್ಷೇತ್ರ ಶಿಕ್ಷಣಾಧಿಕಾರಿಗಳ ಮುಖಾಂತರ ಖಾಸಗಿ ಶಾಲೆಯ ಎಲ್ಲಾ ಆಡಳಿತ ಮಂಡಳಿಗಳಿಗೆ.
7. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

| | | | |
|---|---|---|---|
| 28 | ಬೆಳಗಾವಿ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಬೆಳಗಾವಿ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಬೆಳಗಾವಿ ಜಿಲ್ಲೆ.<br>3.ಶಿಕ್ಷಣಾಧಿಕಾರಿಗಳು ಉಪನಿರ್ದೇಶಕರ ಕಛೇರಿ ಬೆಳಗಾವಿ | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 29 | ಚಿಕ್ಕೋಡಿ(ಶೈ) ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಚಿಕ್ಕೋಡಿ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಚಿಕ್ಕೋಡಿ (ಶೈ) ಜಿಲ್ಲೆ.<br>3. ಕ್ಷೇತ್ರಶಿಕ್ಷಣಾಧಿಕಾರಿಗಳು, ಉಪನಿರ್ದೇಶಕರ ಕಛೇರಿ, ಚಿಕ್ಕೋಡಿ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 30 | ಬಾಗಲಕೋಟೆ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಬಾಗಲಕೋಟೆ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಬಾಗಲಕೋಟೆ ಜಿಲ್ಲೆ.<br>3.ಶಿಕ್ಷಣಾಧಿಕಾರಿಗಳು ಉಪನಿರ್ದೇಶಕರ ಕಛೇರಿ,ಬಾಗಲಕೋಟೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 31 | ವಿಜಯಪುರ ಜಿಲ್ಲೆ | 1 ಉಪನಿರ್ದೇಶಕರು(ಆಡಳಿತ),ವಿಜಯಪುರ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ವಿಜಯಪುರ ಜಿಲ್ಲೆ.<br>3. ಹಿರಿಯ ಉಪನ್ಯಾಸಕರು, ಡಯಟ್ ವಿಜಯಪುರ ಜಿಲ್ಲೆ.. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 32 | ಧಾರವಾಡ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಧಾರವಾಡ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಧಾರವಾಡ ಜಿಲ್ಲೆ.<br>3.ಶಿಕ್ಷಣಾಧಿಕಾರಿಗಳು, ಉಪನಿರ್ದೇಶಕರ ಕಛೇರಿ, ಧಾರವಾಡ ಜಿಲ್ಲೆ | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 33 | ಗದಗ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ),ಗದಗ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಗದಗ ಜಿಲ್ಲೆ.<br>3. ಹಿರಿಯ ಉಪನ್ಯಾಸಕರು, ಡಯಟ್ ಗದಗ ಜಿಲ್ಲೆ.. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 34 | ಹಾವೇರಿ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಹಾವೇರಿ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಹಾವೇರಿ ಜಿಲ್ಲೆ.<br>3. ಹಿರಿಯ ಉಪನ್ಯಾಸಕರು,ಡಯಟ್ ಹಾವೇರಿ ಜಿಲ್ಲೆ.. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 35 | ಉತ್ತರ ಕನ್ನಡ ಜಿಲ್ಲೆ | 1.ಉಪನಿರ್ದೇಶಕರು(ಆಡಳಿತ),ಉತ್ತರ ಕನ್ನಡ ಜಿಲ್ಲೆ. ಕಾರವಾರ<br>2 ಡಯಟ್ ಪ್ರಾಂಶುಪಾಲರು,ಉತ್ತರ ಕನ್ನಡ ಜಿಲ್ಲೆ, ಕುಮಟಾ<br>3. ಹಿರಿಯ ಉಪನ್ಯಾಸಕರು, ಡಯಟ್ ಉತ್ತರ ಕನ್ನಡ ಜಿಲ್ಲೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 36 | ಶಿರಸಿ(ಶೈ) ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ),ಶಿರಸಿ ಶೈಕ್ಷಣಿಕ ಜಿಲ್ಲೆ. ಶಿರಸಿ<br>2. ಡಯಟ್ ಪ್ರಾಂಶುಪಾಲರು, ಶಿರಸಿ(ಶೈಕ್ಷಣಿಕ) ಜಿಲ್ಲೆ.<br>3. ಶಿಕ್ಷಣಾಧಿಕಾರಿಗಳು, ಉಪನಿರ್ದೇಶಕರ ಕಛೇರಿ, ಶಿರಸಿ | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 37 | ಕಲಬುರ್ಗಿ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಕಲಬುರ್ಗಿ ಜಿಲ್ಲೆ. ಕಲಬುರ್ಗಿ<br>2. ಡಯಟ್ ಪ್ರಾಂಶುಪಾಲರು, ಕಲಬುರ್ಗಿ ಜಿಲ್ಲೆ, ಕಲಬುರ್ಗಿ.<br>3. ಹಿರಿಯ ಉಪನ್ಯಾಸಕರು, ಡಯಟ್ ಕಲಬುರ್ಗಿ ಜಿಲ್ಲೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 38 | ಯಾದಗಿರಿ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಯಾದಗಿರಿ ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ಯಾದಗಿರಿ ಜಿಲ್ಲೆ.<br>3. ಹಿರಿಯ ಉಪನ್ಯಾಸಕರು, ಡಯಟ್ ಯಾದಗಿರಿ ಜಿಲ್ಲೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 39 | ಬೀದರ್ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಬೀದರ್ ಜಿಲ್ಲೆ. ಬೀದರ್.<br>2. ಡಯಟ್ ಪ್ರಾಂಶುಪಾಲರು, ಬೀದರ್ ಜಿಲ್ಲೆ.<br>3. ಹಿರಿಯ ಉಪನ್ಯಾಸಕರು, ಡಯಟ್ ಬೀದರ್ ಜಿಲ್ಲೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |
| 40 | ಬಳ್ಳಾರಿ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಬಳ್ಳಾರಿ ಜಿಲ್ಲೆ. ಬಳ್ಳಾರಿ.<br>2. ಡಯಟ್ ಪ್ರಾಂಶುಪಾಲರು,ಬಳ್ಳಾರಿ ಜಿಲ್ಲೆ. ಬಳ್ಳಾರಿ.<br>3. ಹಿರಿಯ ಉಪನ್ಯಾಸಕರು, ಡಯಟ್ ಬಳ್ಳಾರಿ ಜಿಲ್ಲೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ,<br>3. ಸದಸ್ಯರು. |

| | | | |
|---|---|---|---|
| 41 | ಕೊಪ್ಪಳ ಜಿಲ್ಲೆ | 1. ಉಪನಿರ್ದೇಶಕರು(ಆಡಳಿತ), ಕೊಪ್ಪಳ ಜಿಲ್ಲೆ, ಕೊಪ್ಪಳ.<br>2. ಡಯಟ್ ಪ್ರಾಂಶುಪಾಲರು, ಕೊಪ್ಪಳ ಜಿಲ್ಲೆ, ಕೊಪ್ಪಳ.<br>3. ಹಿರಿಯ ಉಪನ್ಯಾಸಕರು,ಡಯಟ್ ಕೊಪ್ಪಳ ಜಿಲ್ಲೆ, ಕೊಪ್ಪಳ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ.<br>3. ಸದಸ್ಯರು. |
| 42 | ರಾಯಚೂರು ಜಿಲ್ಲೆ. | 1. ಉಪನಿರ್ದೇಶಕರು(ಆಡಳಿತ),ರಾಯಚೂರು ಜಿಲ್ಲೆ.<br>2. ಡಯಟ್ ಪ್ರಾಂಶುಪಾಲರು, ರಾಯಚೂರು ಜಿಲ್ಲೆ.<br>3. ಹಿರಿಯ ಉಪನ್ಯಾಸಕರು, ಡಯಟ್ ರಾಯಚೂರು ಜಿಲ್ಲೆ. | 1. ಅಧ್ಯಕ್ಷರು.<br>2. ಕಾರ್ಯದರ್ಶಿ.<br>3. ಸದಸ್ಯರು. |

ಮೇಲ್ಕಂಡಂತೆ ನೇಮಿಸಲಾಗಿರುವ ಅಧಿಕಾರಿಗಳನ್ನೊಳಗೊಂಡ ಸಮಿತಿಯು 2020-21ನೇ ಸಾಲಿನ ಖಾಸಗಿ ಶಾಲೆಗಳ ಶುಲ್ಕಗಳಿಗೆ ಸಂಬಂಧಿಸಿದಂತೆ ಪ್ರತಿ ವಾರದ ಸೋಮವಾರ [ರಜೆ ಇದ್ದಲ್ಲಿ] ಅಥವಾ ಮುಂದಿನ ದಿನದಂದು ಕಡ್ಡಾಯವಾಗಿ ವಿಚಾರಣೆ ನಡೆಸಿ ನಿಯಮಾನುಸಾರ ತಕರಾರು ಇತ್ಯರ್ಥಪಡಿಸುವುದು.

**ಖಾಸಗಿ ಅನುದಾನ ರಹಿತ ಶಾಲೆಯ ಆಡಳಿತ ಮಂಡಳಿಗಳು ತಕರಾರು ಅರ್ಜಿ ಸಲ್ಲಿಸುವಾಗ ಅನುಸರಿಸಬೇಕಾದ ಕ್ರಮಗಳು**

1. ಸದರಿ ಸಮಿತಿಯ ಮುಂದೆ ನಿಗಧಿಪಡಿಸಲಾದ ಶುಲ್ಕದ ವಿವರಗಳೊಂದಿಗೆ ತಕರಾರು ಅರ್ಜಿಗಳನ್ನು ಅಗತ್ಯ ದಾಖಲೆಗಳೊಂದಿಗೆ ಕಡ್ಡಾಯವಾಗಿ ಸಲ್ಲಿಸುವುದು. 2019-20ನೇ ಸಾಲಿನಲ್ಲಿ ವಿದ್ಯಾರ್ಥಿಗಳಿಗೆ ಶುಲ್ಕ ಪಾವತಿಸಲು ನಿಗಧಿಪಡಿಸಿ ನೀಡಿದ್ದ ಮಾಹಿತಿ ಶುಲ್ಕದ ವಿವರಗಳು ತರಗತಿವಾರು ಸಲ್ಲಿಸುವುದು.
2. ತಕರಾರು ಸಲ್ಲಿಸಿದ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ತಕರಾರು ಅರ್ಜಿ ಇತ್ಯರ್ಥ - ವಾಗುವವರೆಗೂ ಯಾವುದೇ ರೀತಿಯ ಶಿಕ್ಷಣದಿಂದ ವಂಚಿತವಾಗದಂತೆ ಕ್ರಮವಹಿಸುವುದಾಗಿ ವಿಚಾರಣಾ ಸಮಿತಿಗೆ ಮನವರಿಕೆ [ಅಫಿಡವಿಟ್] ಪತ್ರ ಮುಖಾಂತರ ಸಲ್ಲಿಸುವುದು.
3. ಸರ್ಕಾರಿ ಆದೇಶದಂತೆ ಶುಲ್ಕವನ್ನು ಏಕೆ ಪಡೆಯಲು ಸಾಧ್ಯವಿಲ್ಲ ಎಂಬ ಬಗ್ಗೆ ಸಕಾರಣಗಳನ್ನು ಅಫಿಡವಿಟ್ ಮುಖಾಂತರ ಲಿಖಿತ ಮೂಲಕ ತಕರಾರು ಅರ್ಜಿ ಸಲ್ಲಿಸುವುದು.

**ಪಾಲಕ / ಪೋಷಕರು ತಕರಾರು ಅರ್ಜಿ ಸಲ್ಲಿಸುವಾಗ ಅನುಸರಿಸಬೇಕಾದ ಕ್ರಮಗಳು**

1. ತಕರಾರು ಅರ್ಜಿಗಳನ್ನು ಸಲ್ಲಿಸಿದ ಶಾಲೆಗಳ ಪೋಷಕರು ಅವಶ್ಯಕವಾಗಿ 2019-20ನೇ ಸಾಲಿನಲ್ಲಿ ನಿಯಮಾನುಸಾರ ಪಾವತಿಸಲಾದ [ಒಂದು ವರ್ಷದ] ಬೋಧನಾ ಶುಲ್ಕದ ರಸೀದಿಗಳನ್ನು ವಿಚಾರಣಾ ಸಮಿತಿಯ ಮುಂದೆ ಹಾಜರುಪಡಿಸುವುದು.
2. 2020-21ನೇ ಸಾಲಿಗೆ ಆಡಳಿತ ಮಂಡಳಿಯು ಶುಲ್ಕವನ್ನು ಪಾವತಿಸುವ ಬಗ್ಗೆ ನಿಗಧಿಪಡಿಸಿ ತಿಳಿಸಿರುವ ಕುರಿತು ದಾಖಲೆಗಳೊಂದಿಗೆ ಸಲ್ಲಿಸುವುದು.
3. ಶಾಲಾ ಆಡಳಿತ ಮಂಡಳಿ ಪಾವತಿಸಲು ತಿಳಿಸಿರುವ ಶುಲ್ಕದ ಕುರಿತು ತಕರಾರಿನ ಬಗ್ಗೆ ಸಕಾರಣ ಒಳಗೊಂಡ ಮಾಹಿತಿಗಳನ್ನು ತಮ್ಮ ತಕರಾರುಗಳನ್ನು ಸಾಬೀತು ಪಡಿಸುವ ದಾಖಲೆಗಳನ್ನು ಅರ್ಜಿಯೊಂದಿಗೆ ಸಲ್ಲಿಸುವುದು
4. ತಾವು ಸಲ್ಲಿಸುತ್ತಿರುವ ಮಾಹಿತಿಗಳು ಸೃಜತೆಯಿಂದ ಕೂಡಿದೆ ಎಂದು ದೃಢೀಕರಣ ಸಲ್ಲಿಸುವುದು.

**ತಕರಾರು ಅರ್ಜಿಗಳನ್ನು ಸ್ವೀಕರಿಸುವ ಕ್ಷೇತ್ರಶಿಕ್ಷಣಾಧಿಕಾರಿಗಳ ಕರ್ತವ್ಯಗಳು**

1. ಕ್ಷೇತ್ರಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ತಕರಾರು ಸ್ವೀಕರಿಸಲು ಪ್ರತ್ಯೇಕ ವಿಭಾಗವನ್ನು ಸ್ಥಾಪಿಸಿ, ಬಂದಿರುವ ತಕರಾರು ದಾಖಲಿಸಿಕೊಂಡು ಅಂದೇ ಸಮಿತಿಗೆ ಸಲ್ಲಿಸುವುದು.
2. 2020-21ನೇ ಸಾಲಿಗೆ ಖಾಸಗಿ ಶಾಲೆಗಳ ಶುಲ್ಕಕ್ಕೆ ಸಂಬಂಧಿಸಿದಂತೆ ಮೇಲಿನಂತೆ ರಚಿಸಲಾದ ಸಮಿತಿಯ ಮುಂದೆ ದೂರುಗಳು ಬಂದಿರುವ ಶಾಲೆಗೆ ಸಂಬಂಧಿಸಿದಂತೆ 2019-20ನೇ ಸಾಲಿನಲ್ಲಿ ನಿಗಧಿಪಡಿಸಿದ ಶುಲ್ಕದ ವಿವರಗಳನ್ನು ನೀಡುವುದು.
3. ಸಮಿತಿಯು ನಿಗಧಿಪಡಿಸಿದ ವಿಚಾರಣಾ ದಿನದಂದು ಕಡ್ಡಾಯವಾಗಿ ತಮ್ಮ ಕಛೇರಿ ವ್ಯವಸ್ಥಾಪಕರು / ಅಧೀಕ್ಷಕರು ಶುಲ್ಕದ ಬಗ್ಗೆ ನಿಯಮಾನುಸಾರ ದೂರು ಸಲ್ಲಿಸಿದ ಶಾಲೆಯ ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿಕೊಂಡು ವಿಚಾರಣೆಗೆ ಹಾಜರಾಗುವಂತೆ ಕ್ರಮವಹಿಸುವುದು.
4. ತಕರಾರು ದಾಖಲಿಸಿದ ಶಾಲೆಯಲ್ಲಿನ ಯಾವುದೇ ವಿದ್ಯಾರ್ಥಿಗಳಿಗೆ ತಕರಾರು ಅರ್ಜಿ ಇತ್ಯರ್ಥವಾಗುವವರೆಗೂ ತೊಂದರೆಯಾಗದಂತೆ ಅಗತ್ಯ ಕ್ರಮವಹಿಸುವುದು.

5. ತಕರಾರು ಬಂದಿರುವ ಶಾಲೆಯ ಪೋಷಕರಿಂದ 2019-20 ಮತ್ತು 2020-21ನೇ ಸಾಲಿನಲ್ಲಿ ಪಾವತಿಸಲಾದ ರಸೀದಿಗಳನ್ನು ಅವಶ್ಯವಾದಲ್ಲಿ ಪಡೆದು ಸಲ್ಲಿಸುವುದು.
6. ತ್ವರಿತಗತಿಯಲ್ಲಿ ತಕರಾರು ಇತ್ಯರ್ಥ ಪಡಿಸಲು ಸಮಿತಿಗೆ ಅಗತ್ಯ ಸಹಕಾರ ನೀಡುವುದು. ಆಡಳಿತ ಮಂಡಳಿಗಳು ವಿಚಾರಣಾ ಸಮಿತಿ ನೀಡುವ ಆದೇಶವನ್ನು ಪಾಲಿಸದೇ ಇದ್ದಲ್ಲಿ ಅಂತಹ ಶಾಲೆಗಳ ವಿರುದ್ಧ ನಿಯಮಾನುಸಾರ ಕ್ರಮವಹಿಸುವುದು.

**ತಕರಾರು ಇತ್ಯರ್ಥ ಪಡಿಸುವಲ್ಲಿ ಸಮಿತಿಯ ಕರ್ತವ್ಯಗಳು:**

1. ಖಾಸಗಿ ಶಾಲಾ ಆಡಳಿತ ಮಂಡಳಿ ನೀಡುವಂತಹ ತಕರಾರು ಅರ್ಜಿಗಳನ್ನು ಕ್ಷೇತ್ರಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಸ್ವೀಕರಿಸಿದ ನಂತರ ಅವರಿಂದ ಪಡೆದು ತಕರಾರು ಅರ್ಜಿಗಳನ್ನು ರಿಜಿಸ್ಟರ್‌ನಲ್ಲಿ ನೊಂದಾಯಿಸುವುದು.
2. ವಿಚಾರಣೆಗೆ ಮುಂಚಿತವಾಗಿ ಖಾಸಗಿ ಅನುದಾನರಹಿತ ಶಾಲೆಗಳಲ್ಲಿ ಶುಲ್ಕ ಪಡೆಯಲು ಇಲಾಖೆ ನೀಡಿರುವ ಮಾರ್ಗಸೂಚಿ, ಸುತ್ತೋಲೆ, ಅಧಿಸೂಚನೆ ಮತ್ತು ಇತರೆ ದಾಖಲೆಗಳನ್ನು ಆಧರಿಸಿ ಪರಿಶೀಲನೆ ನಡೆಸುವುದು.
3. ಶಾಲಾ ಆಡಳಿತ ಮಂಡಳಿಗಳು / ಪೋಷಕರು ತಕರಾರು ಅರ್ಜಿ ಜೊತೆಗೆ ಸೂಕ್ತ ದಾಖಲೆಗಳನ್ನು ಹಾಜರುಪಡಿಸದಿದ್ದಲ್ಲಿ ಅಂತಹ ಅರ್ಜಿಗಳಿಗೆ ಸೂಕ್ತ ಹಿಂಬರಹ ನೀಡುವುದು.
4. ತಕರಾರು ಅರ್ಜಿಗಳ ಬಗ್ಗೆ ಸಂಬಂಧಿಸಿದ ಶಾಲಾ ಆಡಳಿತ ಮಂಡಳಿ, ಕ್ಷೇತ್ರಶಿಕ್ಷಣಾಧಿಕಾರಿಗಳು, ಉಪನಿರ್ದೇಶಕರು (ಆಡಳಿತ) ಇವರಿಗೆ ನಿಯಮಾನುಸಾರ ನೋಟೀಸು ನೀಡಿ **ಪ್ರತಿ ಸೋಮವಾರ** ದಂದು ವಿಚಾರಣೆ ನಡೆಸಿ ಅಂದೇ (speaking order) ಆದೇಶ ಹೊರಡಿಸುವುದು. ತಿರಸ್ಕರಿಸಿದಲ್ಲಿ ಸ್ಪಷ್ಟ ಕಾರಣ ನಮೂದಿಸುವುದು.
5. 2020-21ನೇ ಶೈಕ್ಷಣಿಕ ಸಾಲಿಗೆ ಸಂಬಂಧಿಸಿದಂತೆ ಮಾತ್ರ ಪ್ರತಿ ತಿಂಗಳು ಸ್ವೀಕರಿಸಿದ ತಕರಾರು ಅರ್ಜಿಗಳನ್ನು ಇತ್ಯರ್ಥ ಪಡಿಸಿದ ತಕರಾರುಗಳಿಗೆ ನೀಡಿದ ಆದೇಶವನ್ನು ಪಾಲಿಸಿದ ಶಾಲೆಗಳು ಹಾಗೂ ಇತ್ಯರ್ಥ ಪಡಿಸಿದ ತಕರಾರುಗಳ ಬಗ್ಗೆ ಕೆಳಕಂಡ ಅಧಿಕಾರಿಗಳಿಗೆ ಕಡ್ಡಾಯವಾಗಿ ತಿಂಗಳ ಅಂತ್ಯದಲ್ಲಿ ಕ್ರೋಢೀಕೃತ ವರದಿ ನೀಡುವುದು.
   1. ಬೆಂಗಳೂರು ವಿಭಾಗ, ನಿರ್ದೇಶಕರು(ಪ್ರಾಥಮಿಕ ಶಿಕ್ಷಣ), ಆಯುಕ್ತರ ಕಛೇರಿ, ಬೆಂಗಳೂರು.
   2. ಮೈಸೂರು ವಿಭಾಗ, ನಿರ್ದೇಶಕರು(ಪ್ರೌಢ ಶಿಕ್ಷಣ), ಆಯುಕ್ತರ ಕಛೇರಿ, ಬೆಂಗಳೂರು.
   3. ಕಲಬುರ್ಗಿ ವಿಭಾಗ, ನಿರ್ದೇಶಕರು ಅಪರ ಆಯುಕ್ತರ ಕಛೇರಿ, ಕಲಬುರ್ಗಿ.
   4. ಧಾರವಾಡ ವಿಭಾಗ, ನಿರ್ದೇಶಕರು ಅಪರ ಆಯುಕ್ತರ ಕಛೇರಿ, ಧಾರವಾಡ.
6. ತಕರಾರು ಗರಿಷ್ಠ ಮೂರು ವಿಚಾರಣೆಯೊಳಗೆ ಪೋಷಕರು ಮತ್ತು ಶಾಲಾ ಆಡಳಿತ ಮಂಡಳಿಗೆ ಸಮಾನ ಅವಕಾಶ ನೀಡಿ, ತ್ವರಿತಗತಿವಾಗಿ ಇತ್ಯರ್ಥ ಪಡಿಸುವುದು ಸಮಿತಿಯ ಜವಾಬ್ದಾರಿಯಾಗಿರುತ್ತದೆ.

ಮೇಲ್ಕಂಡ ಅಂಶಗಳನ್ನು ನಿಯಮಾನುಸಾರ ಪರಿಶೀಲಿಸಿ ಹಾಗೂ ವಿಚಾರಣೆ ನಡೆಸಿ ತಕರಾರು ಅರ್ಜಿಗಳನ್ನು ತ್ವರಿತವಾಗಿ ಇತ್ಯರ್ಥಪಡಿಸಲು ಸೂಚಿಸಲಾಗಿದೆ. ಈ ಸಮಿತಿ ನಿರ್ವಹಿಸಲು ಬೇಕಾಗುವ ಅಧಿಕಾರಿ / ಸಿಬ್ಬಂದಿಗಳನ್ನು ತಾತ್ಕಾಲಿಕವಾಗಿ ನಿರ್ದೇಶಕರು / ಸಹನಿರ್ದೇಶಕರ / ಉಪನಿರ್ದೇಶಕರುಗಳ ಸಮಿತಿಗಳಿಗೆ ಆಯಾ ಅಧಿಕಾರಿಗಳ ಕಛೇರಿಯಲ್ಲಿನ ಸಿಬ್ಬಂದಿಗಳನ್ನು ನಿಯೋಜಿಸಿಕೊಳ್ಳುವುದು. ಜಿಲ್ಲಾ ಹಂತದಲ್ಲಿ ಉಪನಿರ್ದೇಶಕರ ಕಛೇರಿಗಳಿಂದ ಸಿಬ್ಬಂದಿಗಳನ್ನು ನಿಯೋಜಿಸಿಕೊಳ್ಳುವುದು.

ಆಯುಕ್ತರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಬೆಂಗಳೂರು

ಗೆ,
**ಅಧಿಕಾರಯುಕ್ತ ಅಧಿಕಾರಿಗಳ ಸಮಿತಿಯ ಅಧ್ಯಕ್ಷರು / ಕಾರ್ಯದರ್ಶಿ / ಸದಸ್ಯರುಗಳಿಗೆ.**

ಪ್ರತಿಯನ್ನು:

1. ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರ ಆಪ್ತ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು ಇವರಿಗೆ ಸಲ್ಲಿಸುತ್ತಾ ಮಾನ್ಯ ಸಚಿವರ ಗಮನಕ್ಕೆ ತರುವಂತೆ ಕೋರಿದೆ.

2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ(ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ), ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರಿಗೆ ಗೌರವಗಳೊಂದಿಗೆ ಮಾಹಿತಿಗಾಗಿ.
3. ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ, ಕರ್ನಾಟಕ, ಬೆಂಗಳೂರು ಮಾಹಿತಿಗಾಗಿ.
4. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರ್ಗಿ / ಧಾರವಾಡ
5. ರಾಜ್ಯದ ಎಲ್ಲಾ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು(ಆಡಳಿತ) / ಉಪನಿರ್ದೇಶಕರು (ಅಭಿವೃದ್ಧಿ) ಇವರಿಗೆ ಸೂಕ್ತ ಕ್ರಮಕ್ಕಾಗಿ.
6. ರಾಜ್ಯದ ಎಲ್ಲಾ ತಾಲ್ಲೂಕು / ವಲಯಗಳ ಕ್ಷೇತ್ರಶಿಕ್ಷಣಾಧಿಕಾರಿಗಳಿಗೆ ಸೂಕ್ತ ಕ್ರಮಕ್ಕಾಗಿ.
7. ಹಿರಿಯ ಸಹಾಯಕ ನಿರ್ದೇಶಕರು, ಇ-ಆಡಳಿತ, ಆಯುಕ್ತರ ಕಛೇರಿ ಇವರು ಈ ಸುತ್ತೋಲೆಯನ್ನು ಇಲಾಖಾ ವೆಬ್‌ಸೈಟ್ ನಲ್ಲಿ ಪ್ರಕಟಿಸುವುದಕ್ಕಾಗಿ.
8. ಕಛೇರಿ ಪ್ರತಿ.



ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 39 ಎಂ.ಹೆಚ್.ಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:18.02.2021

**ಇಂದ,**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಶಿಕ್ಷಣ ಇಲಾಖೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಬಹುಮಹಡಿಗಳ ಕಟ್ಟಡ,
ಬೆಂಗಳೂರು

**ರವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು

**ಮಾನ್ಯರೇ,**

ವಿಷಯ: ವಿಧಾನಸಭೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 893ಕ್ಕೆ ಉತ್ತರಿಸುವ ಬಗ್ಗೆ.

****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜೇಗೌಡ.ಟಿ.ಡಿ (ಶೃಂಗೇರಿ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 893ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಎಸ್.ಆರ್.ಎಸ್. ನಾಥನ್)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

18/2

Recd
19/02/2021

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 893

ಸದಸ್ಯರ ಹೆಸರು : ಶ್ರೀ ರಾಜೇಗೌಡ.ಟಿ.ಡಿ (ಶೃಂಗೇರಿ)

ಉತ್ತರಿಸಬೇಕಾದ ದಿನಾಂಕ : 04.02.2021

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ನಗರ ಪ್ರದೇಶಗಳಲ್ಲಿನ ಶಾಲೆಗಳಂತೆ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಆನ್‌ಲೈನ್ ಶಿಕ್ಷಣ ಒದಗಿಸಲು ಗ್ರಾಮೀಣ ಪ್ರದೇಶಗಳ ಶಾಲೆಗಳಲ್ಲಿನ ಪರಿಸ್ಥಿತಿಯನ್ನು ಅಧ್ಯಯನ ಮಾಡಲಾಗಿದೆಯೇ;(ಮಾಹಿತಿ ನೀಡುವುದು) | ಹೌದು.<br>ನಗರ ಪ್ರದೇಶದ ವಿದ್ಯಾರ್ಥಿಗಳಂತೆ ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಅವಕಾಶಗಳಿಂದ ಕೋವಿಡ್–19ರ ಕಾರಣದಿಂದ ವಂಚಿತರಾಗದಂತೆ ಕ್ರಮವಹಿಸುವುದು ಸರ್ಕಾರದ ಆದ್ಯ ಕರ್ತವ್ಯವಾಗಿದೆ. ಆದ್ದರಿಂದ BRP/CRP/BRCO/BEO/DDPI (ಆಡಳಿತ–ಅಭಿವೃದ್ಧಿ) ಅಧಿಕಾರಿಗಳ ಮುಖಾಂತರ ಗ್ರಾಮೀಣ ಭಾಗದ ಶಾಲೆಗಳ ಪರಿಸ್ಥಿತಿಗಳ ಬಗ್ಗೆ ಅವಲೋಕಿಸಿ ಮಾಹಿತಿ ಸಂಗ್ರಹಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಎಷ್ಟು ಪ್ರಮಾಣದ ಪ್ರದೇಶಗಳಲ್ಲಿನ ಶಾಲೆಗಳಲ್ಲಿನ ವಿದ್ಯಾರ್ಥಿಗಳಿಗೆ ಆನ್‌ಲೈನ್ ಹಾಗೂ ಸ್ಮಾರ್ಟ್‌ಫೋನ್ ಹೊಂದುವ ಸಾಮರ್ಥ್ಯಗಳಿಲ್ಲವೆಂದು ಅಂದಾಜಿಸಲಾಗಿದೆ; (ಪೂರ್ಣ ವಿವರ ನೀಡುವುದು) | ಗ್ರಾಮೀಣ ಪ್ರದೇಶದ ಶೇಕಡ 80% ರಷ್ಟು ವಿದ್ಯಾರ್ಥಿಗಳಲ್ಲಿ ಆನ್‌ಲೈನ್ ಶಿಕ್ಷಣಕ್ಕೆ ಅಗತ್ಯವಾದ Smart Phone / TAB / ಲ್ಯಾಪ್‌ಟ್ಯಾಪ್ / ಗಣಕಯಂತ್ರ ಮತ್ತು ಅಂತರ್‌ಜಾಲ ಸೌಲಭ್ಯಗಳು ಇಲ್ಲದಿರುವುದು ತಿಳಿದು ಬಂದಿದೆ. |
| ಇ) | ಅಂತಹ ಪ್ರದೇಶಗಳ ವಿದ್ಯಾರ್ಥಿಗಳಿಗೆ ಸದರಿ ಶಿಕ್ಷಣ ಸೌಲಭ್ಯ ಒದಗಿಸಲು ಯಾವ ಪರ್ಯಾಯ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ? (ವಿವರ ನೀಡುವುದು) | ಆನ್‌ಲೈನ್ ಶಿಕ್ಷಣದಲ್ಲಿನ ಎಲ್ಲಾ ಮಿತಿಗಳನ್ನು ಅರಿತ ಇಲಾಖೆಯು ಇದಕ್ಕೆ ಪರಿಹಾರವಾಗಿ/ಪರ್ಯಾಯವಾಗಿ 'ವಿದ್ಯಾಗಮ ಹಾಗೂ ಸಂವೇದ' ಎಂಬ ಎರಡು ಶೈಕ್ಷಣಿಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಿದೆ.<br>• ವಿದ್ಯಾಗಮ: 6ರಿಂದ 8ನೇ ತರಗತಿ ವಿದ್ಯಾರ್ಥಿಗಳ ನಿರಂತರ ಕಲಿಕೆಯ ದೃಷ್ಟಿಯಿಂದ ಸದರಿ ಕಾರ್ಯಕ್ರಮದ ಅಡಿಯಲ್ಲಿ ವಾರದ ಮೂರು ದಿನಗಳಂದು 3 ಅವಧಿಗಳ ಶೈಕ್ಷಣಿಕ ಮಾರ್ಗದರ್ಶನಗಳೊಂದಿಗೆ ನಿರಂತರ ಕಲಿಕೆ ಸಾಗುತ್ತಿದೆ.<br>ಇಲ್ಲಿ ಕಿರುಬೋಧನೆ, ಅಭ್ಯಾಸ, ಚಟುವಟಿಕೆ, ಪ್ರಶ್ನೋತ್ತರ ಚರ್ಚೆ, ಅನುಮಾನಗಳಿಗೆ ಪರಿಹಾರ, ಗೃಹಕಾರ್ಯ ನಿಯೋಜನೆ, ಮತ್ತು ಸಂವಾದದಂತಹ ಕ್ರಿಯಾಶೀಲ |

| | | |
|---|---|---|
| | | ಕ್ರಮಗಳಲ್ಲಿ ಕಲಿಸುವ ಕಾರ್ಯ ಜಾರಿಯಾಗಿದೆ.<br>• ಸಂವೇದ:- ಇದು ದೂರದರ್ಶನ ಚಂದನ ವಾಹಿನಿಯಲ್ಲಿ ಬಿತ್ತರಗೊಳ್ಳುತ್ತಿರುವ ಬೋಧನಾ-ಕಲಿಕಾ ತರಗತಿ ಯೋಜನೆಯಾಗಿದೆ. ಸರ್ಕಾರವು ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ (DSERT), ಬೆಂಗಳೂರು ಹಾಗೂ ದೂರದರ್ಶನ ಚಂದನ ವಾಹಿನಿಯ ಸಹಯೋಗದಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. ಇಲ್ಲಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ಶಾಲಾ ಪಠ್ಯವಸ್ತುವಿಗೆ ಅನುಗುಣವಾಗಿ ಆಯ್ದ ಪರಿಣಿತ ಹಾಗೂ ಆಸಕ್ತಿದಾಯಕ ಶಿಕ್ಷಕರ ತಂಡಗಳನ್ನು ವಿಷಯವಾರು ರಚಿಸಿದೆ. ಅವರುಗಳ ಮೂಲ ವಿವಿಧ ತರಗತಿಗಳ ಪಠ್ಯವಸ್ತುವಿನ ಆಧಾರದಲ್ಲಿ ದೂರದರ್ಶನ ತರಗತಿಗಳನ್ನು ಚಿತ್ರೀಕರಿಸಿ ದೂರದರ್ಶನ ಚಂದನ ವಾಹಿನಿಯಲ್ಲಿ ಪಾಠಗಳನ್ನು ಬಿತ್ತರಿಸಲಾಗುತ್ತಿದೆ.<br>• 6ರಿಂದ 10ನೇ ತರಗತಿಗಳ ಪಠ್ಯ ವಿಷಯಕ್ಕೆ ಸಂಬಂಧಿಸಿದ ಇ-ಪಾಠಗಳನ್ನು 'ಮಕ್ಕಳವಾಣಿ **Youtube**' ಚಾನಲ್‌ನಲ್ಲಿ ಲಭ್ಯವಾಗುವಂತೆ ಕ್ರಮವಹಿಸಿದೆ.<br>• ಸಂವೇದ ಯೋಜನೆಯಡಿ ಬಿತ್ತರವಾದ ಎಲ್ಲಾ ಇ-ಪಾಠಗಳನ್ನು **DSERT** ಯ **Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• 8ರಿಂದ 10ನೇ ತರಗತಿಯ ಸಮಾಜ ವಿಜ್ಞಾನ ಆಂಗ್ಲ ಮಾಧ್ಯಮ ಪಾಠಗಳನ್ನು **DSERT** ಯ **Youtube** ಚಾನಲ್‌ನಲ್ಲಿ ಸಹ ಲಭ್ಯವಾಗುವಂತೆ ಕ್ರಮವಹಿಸಿದೆ.<br>• **NCERT** ಯಿಂದ ರೂಪಿತವಾದ 8ರಿಂದ 10ನೇ ತರಗತಿಗಳ ವಿಜ್ಞಾನ ಮತ್ತು ಗಣಿತ ವಿಷಯಗಳ ಆಂಗ್ಲ ಮಾಧ್ಯಮ ಇ-ಪಾಠಗಳು **DIKSHA** ವೆಬ್‌ಸೈಟ್ ಮತ್ತು ಪೋರ್ಟ್‌ಗಳಲ್ಲಿ ಲಭ್ಯವಿದ್ದು, ಈ ಬಗ್ಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ (DSERT) ಇಲಾಖೆಯು ವ್ಯಾಪಕ ಪ್ರಚಾರ ನೀಡಿದೆ.<br>ಇಂದಿನವರೆಗೂ ಸುಮಾರು ಎಂಟು ಸಾವಿರ **(8000)** ಇ- |

| | | |
|---|---|---|
| | | ಸಂಪನ್ಮೂಲಗಳು, ಮಕ್ಕಳವಾಣಿ **Youtube** ಚಾನಲ್ ಮತ್ತು **DSERT Youtube** ಚಾನಲ್‌ನಲ್ಲಿ ಲಭ್ಯವಿರುತ್ತವೆ.<br>11 ಮತ್ತು 12 ನೇ ತರಗತಿಗಳಿಗೆ ವಿಡಿಯೋ ಪಾಠಗಳನ್ನು ಸಿದ್ಧಪಡಿಸಿ **Youtube** ಚಾನಲ್‌ನಲ್ಲಿ ಒದಗಿಸಲಾಗಿದೆ.<br>9 ರಿಂದ 12ನೇ ತರಗತಿ ವಿದ್ಯಾರ್ಥಿಗಳಿಗೆ ಪೂರ್ಣ ಪ್ರಮಾಣದ ತರಗತಿಗಳನ್ನು ಪ್ರಾರಂಭಿಸಲಾಗಿದೆ. |

ಇಪಿ 39 ಎಂ.ಹೆಚ್.ಟಿ 2021

S. Su—

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 38 ಎಂ.ಹೆಚ್.ಟಿ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:18.02.2021

**ಇಂದ,**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಶಿಕ್ಷಣ ಇಲಾಖೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಬಹುಮಹಡಿಗಳ ಕಟ್ಟಡ,
ಬೆಂಗಳೂರು

**ರವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು

**ಮಾನ್ಯರೇ,**

ವಿಷಯ: ವಿಧಾನಸಭೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 859ಕ್ಕೆ ಉತ್ತರಿಸುವ ಬಗ್ಗೆ.

****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀಮತಿ ಸೌಮ್ಯ ರೆಡ್ಡಿ(ಜಯನಗರ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 859ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಎಸ್.ಆರ್.ಎಸ್. ನಾಥನ್) 18/2
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)
18/2

Recd
19/02/2021

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 859 |
| ಸದಸ್ಯರ ಹೆಸರು | : | ಶ್ರೀಮತಿ ಸೌಮ್ಯ ರೆಡ್ಡಿ(ಜಯನಗರ) |
| ಉತ್ತರಿಸಬೇಕಾದ ದಿನಾಂಕ | : | 04.02.2021 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸ್ತುತ ವರ್ಷದಲ್ಲಿ ವಿದ್ಯಾಗಮ ಯೋಜನೆಯಡಿಯಲ್ಲಿ ಶಾಲಾ ತರಗತಿಗಳು, ಆನ್‌ಲೈನ್ ತರಗತಿಗಳು ಪ್ರಾರಂಭವಾಗಿದ್ದೂ ಕೂಡ ಸರ್ಕಾರ ಬಡ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ಸೌಲಭ್ಯವನ್ನು ಒದಗಿಸಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು.<br>ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ವಿದ್ಯಾಗಮ ಕಾರ್ಯಕ್ರಮವನ್ನು 6ರಿಂದ 9ನೇ ತರಗತಿ ವಿದ್ಯಾರ್ಥಿಗಳಿಗೆ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯಡಿ ವಿದ್ಯಾರ್ಥಿಗಳು ಶಾಲೆಗಳಿಗೆ ವಾರದಲ್ಲಿ 3 ಬಾರಿ ಅರ್ಧ ದಿನದಂತೆ ಹಾಜರಾಗಿ ಶೈಕ್ಷಣಿಕ ಚಟುವಟಿಕೆಗಳ ನಿರ್ವಹಣೆಗೆ ಮಾರ್ಗದರ್ಶನ ಪಡೆದುಕೊಳ್ಳುತ್ತಿದ್ದಾರೆ.<br>ಅಂತೆಯೇ ಶಾಲೆಗಳಲ್ಲಿ 10ನೇ ತರಗತಿಯನ್ನು ಪೂರ್ಣ ಪ್ರಮಾಣದಲ್ಲಿ ನಡೆಸಲಾಗುತ್ತಿದೆ. ದಿನಾಂಕ:01.02.2021ರಿಂದ 9ನೇ ತರಗತಿಗಳನ್ನು ಸಹ ಪೂರ್ಣ ಪ್ರಮಾಣದಲ್ಲಿ ಪ್ರಾರಂಭಿಸಲಾಗಿದೆ. ಶಾಲೆಗಳಲ್ಲಿ ಆನ್‌ಲೈನ್ ತರಗತಿಗಳನ್ನು ಕಡ್ಡಾಯಗೊಳಿಸಿರುವುದಿಲ್ಲ ಆದ್ದರಿಂದ ಲ್ಯಾಪ್‌ಟಾಪ್ ಬಳಕೆ ಅಗತ್ಯವಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಯಾವಾಗ ಬಡ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ಸೌಲಭ್ಯವನ್ನು ಒದಗಿಸಲಾಗುವುದು? | 9 ಮತ್ತು 10ನೇ ತರಗತಿಗಳನ್ನು ಪೂರ್ಣ ಪ್ರಮಾಣದಲ್ಲಿ ಪ್ರಾರಂಭಿಸಲಾಗಿದೆ. 6ರಿಂದ 8ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾಗಮ ಯೋಜನೆ ಜಾರಿಯಲ್ಲಿದೆ. ಕೋವಿಡ್-19ರ ಹಿನ್ನೆಲೆಯಲ್ಲಿ ಆರ್ಥಿಕ ನಿರ್ಬಂಧತೆ ಇದೆ. ಮುಂದಿನ ದಿನಗಳಲ್ಲಿ ಅನುದಾನದ ಲಭ್ಯತೆ ಹಾಗೂ ಅಗತ್ಯತೆ ಮೇರೆಗೆ ಸದರಿ ಸೌಲಭ್ಯಗಳನ್ನು ನೀಡುವ ಬಗ್ಗೆ ಪರಿಶೀಲಿಸಲಾಗುವುದು. |

ಇಪಿ 38 ಎಂ.ಹೆಚ್.ಟಿ 2021

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 29 ಪ್ರೌಶಿಉ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 16.2 .2021

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ,
ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ,
ಬೆಂಗಳೂರು – 560001.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ವಿಧಾನ ಪರಿಷತ್ತು
ವಿಧಾನಸೌಧ,
ಬೆಂಗಳೂರು–560001.

**ಮಾನ್ಯರೆ,**

**ವಿಷಯ** : ಕರ್ನಾಟಕ ವಿಧಾನ ಸಭೆ / ಪರಿಷತ್ತು ಸದಸ್ಯರಾದ ಶ್ರೀ [illegible] ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 920 ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** [illegible] ಚು.ಗು. 920/2021 ದಿನಾಂಕ [illegible]/2021

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಶ್ರೀ [illegible] ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 920 ರ ಪ್ರಶ್ನೆಗೆ 20 ಉತ್ತರದ ಪ್ರತಿಗಳನ್ನು ಈ ಪತ್ರದೊಡನೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

B. Shashidhara
**(ಬಿ. ಶಶಿಧರ)**
ಶಾಖಾಧಿಕಾರಿ
ಶಿಕ್ಷಣ ಇಲಾಖೆ, [ಪ್ರೌಢ–2 ಶಾಖೆ]
ದೂರವಾಣಿ ಸಂಖ್ಯೆ. 22032090

Rcvd
17/02/2021

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **920**
ಸದಸ್ಯರ ಹೆಸರು : ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ)
ಉತ್ತರಿಸಬೇಕಾದ ದಿನಾಂಕ : 04.02.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| | | |
|---|---|---|
| (ಅ) | ರಾಜ್ಯದ ಗ್ರಾಮೀಣ ಪ್ರದೇಶದಲ್ಲಿರುವ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಕಳೆದ ವರ್ಷದ ಎಸ್.ಎಸ್.ಎಲ್.ಸಿ ಪರೀಕ್ಷೆಯ ಫಲಿತಾಂಶವು ಗಣನೀಯವಾಗಿ ಇಳಿಮುಖವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಸಂಪೂರ್ಣ ಮಾಹಿತಿ ನೀಡುವುದು) | ಗ್ರಾಮೀಣ ಪ್ರದೇಶದಲ್ಲಿರುವ ಸರ್ಕಾರಿ ಪ್ರೌಢ ಶಾಲೆಗಳಲ್ಲಿ 2018-19 ಮತ್ತು 2019-2020ನೇ ಸಾಲಿನ ಎಸ್.ಎಸ್.ಎಲ್.ಸಿ ಫಲಿತಾಂಶದ ವಿವರ ಈ ಕೆಳಕಂಡಂತಿರುತ್ತದೆ. (ಕೆಳಗಿನ ಪಟ್ಟಿ ನೋಡಿ) |

| ಕ್ರ ಸಂ | ವರ್ಷ | ಪರೀಕ್ಷೆಗೆ ಹಾಜರಾದವರು | ಉತ್ತೀರ್ಣರಾದವರು | ಶೇಕಡವಾರು ಫಲಿತಾಂಶ | ಗ್ರಾಮೀಣ ಸರ್ಕಾರಿ ಪ್ರೌಢಶಾಲೆಗಳ ಶೇಕಡಾವಾರು ಫಲಿತಾಂಶ |
|---|---|---|---|---|---|
| 1. | 2018-19 | 825468 | 608336 | 73.70 | 80.73 |
| 2. | 2019-20 | 811050 | 582316 | 71.80 | 75.86 |

1. 2018-19ನೇ ಸಾಲಿನಲ್ಲಿ ಶೇ.80.73 ಫಲಿತಾಂಶ ಬಂದಿದ್ದು, 2019-20ನೇ ಸಾಲಿನಲ್ಲಿ ಶೇ.75.86 ಫಲಿತಾಂಶ ಬಂದಿರುತ್ತದೆ. ಫಲಿತಾಂಶ ಪರಿಶೀಲಿಸಲಾಗಿ, ಅಲ್ಪ ಪ್ರಮಾಣದಲ್ಲಿ ಇಳಿಕೆಯಾಗಿರುವುದು ಕಂಡುಬರುತ್ತದೆ. ಕೋವಿಡ್-19ರ ಹಿನ್ನೆಲೆಯಲ್ಲಿ ಉಂಟಾದ ಸಂಕಷ್ಟಕರ ಪರಿಸ್ಥಿತಿಯಿಂದಾಗಿ ಈ ಇಳಿಕೆ ಕಂಡುಬಂದಿದೆ.
2. 2019-20ನೇ ಸಾಲಿನ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ 18072 ವಿದ್ಯಾರ್ಥಿಗಳು ಕೋವಿಡ್-19ರ ಹಿನ್ನೆಲೆಯಲ್ಲಿ ಪರೀಕ್ಷೆಯಿಂದ ವಿನಾಯಿತಿ ಪಡೆದಿರುತ್ತಾರೆ.

| | | |
|---|---|---|
| (ಆ) | ರಾಜ್ಯದ ಗ್ರಾಮೀಣ ಪ್ರದೇಶದಲ್ಲಿರುವ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಈ ವರ್ಷದ ಎಸ್.ಎಸ್.ಎಲ್.ಸಿ ಪರೀಕ್ಷೆಯ ಫಲಿತಾಂಶವನ್ನು ಉತ್ತಮಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | 1. ದಿನಾಂಕ:20.07.2020 ರಿಂದ 10ನೇ ತರಗತಿ ವಿದ್ಯಾರ್ಥಿಗಳಿಗೆ ಪುನರ್ಮನನ ವೀಡಿಯೋ ಪಾಠಗಳನ್ನು ಪ್ರಸಾರ ಮಾಡಲಾಗಿದೆ.<br>2. 10ನೇ ತರಗತಿ ವಿದ್ಯಾರ್ಥಿಗಳಿಗೆ ದಿನಾಂಕ; 17.08.2020 ರಿಂದ 01.01.2021ರವರೆಗೆ ಕನ್ನಡ ಮಾಧ್ಯಮದ ಎಲ್ಲಾ ವಿಷಯಗಳ ಸಂವೇದ ವೀಡಿಯೋ ಪಾಠಗಳನ್ನು ದೂರದರ್ಶನ ಚಂದನ ವಾಹಿನಿ ಮೂಲಕ ಪ್ರಸಾರ ಮಾಡಲಾಗಿರುತ್ತದೆ. |

| | | |
|---|---|---|
| | | 3. ದಿನಾಂಕ: 04.01.2021 ರಿಂದ ಕನ್ನಡ ಮಾಧ್ಯಮದ ಕೋರ್ ವಿಷಯಗಳ ಪಾಠಗಳನ್ನು ಮರುಪ್ರಸಾರ ಮಾಡಲಾಗುತ್ತಿದೆ.<br>4. ದಿನಾಂಕ: 18.01.2021 ರಿಂದ 10ನೇ ತರಗತಿಯ ಆಂಗ್ಲ ಮಾಧ್ಯಮದ ಕೋರ್ ವಿಷಯಗಳ ವೀಡಿಯೋ ಪಾಠಗಳ ಪ್ರಸಾರ ಮಾಡಲಾಗುತ್ತಿದೆ.<br>5. ಸಿದ್ಧಪಡಿಸಿದ ವೀಡಿಯೋ ಪಾಠಗಳನ್ನು ಜ್ಞಾನದೀಪ, ಮಕ್ಕಳವಾಣಿ ಯೂಟ್ಯೂಬ್ ಚಾನಲ್‌ನಲ್ಲಿ ಮತ್ತು ದೀಕ್ಷಾ ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಲಾಗಿದೆ.<br>6. ಮೊಬೈಲ್‌ನಲ್ಲಿ ದೀಕ್ಷಾ ಆಪ್ ಮುಖಾಂತರ ಕೂಡ ಇ-ಸಂಪನ್ಮೂಲಗಳನ್ನು ಬಳಸುವ ಬಗ್ಗೆ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಮಾಹಿತಿ ನೀಡಲಾಗಿದೆ.<br>7. 10ನೇ ತರಗತಿಯ ಎಲ್ಲಾ ವಿಷಯಗಳ ಕನ್ನಡ ಮತ್ತು ಆಂಗ್ಲ ಮಾಧ್ಯಮದ ಎಲ್ಲಾ ಪಠ್ಯಪುಸ್ತಕಗಳಿಗೆ ಪಾಠವಾರು ಕ್ಯೂ.ಆರ್ ಕೋಡ್ ಅಳವಡಿಸಿ, ದೀಕ್ಷಾ ಪೋರ್ಟಲ್‌ನಲ್ಲಿರುವ ಸಂಬಂಧಿಸಿದ ಇ-ಸಂಪನ್ಮೂಲಗಳನ್ನು ಲಿಂಕ್ ಮಾಡಲಾಗಿದೆ. ಕ್ಯೂ.ಆರ್. ಕೋಡ್‌ಗಳನ್ನು ಸ್ಕ್ಯಾನ್ ಮಾಡುವ ಮೂಲಕ ಇ-ಸಂಪನ್ಮೂಲಗಳ ಬಳಕೆಯ ಬಗ್ಗೆ ಶಿಕ್ಷಕರಿಗೆ ಹಾಗೂ ವಿದ್ಯಾರ್ಥಿಗಳಿಗೆ ಮಾಹಿತಿ ನೀಡಲಾಗಿದೆ.<br>8. ಕೋವಿಡ್-19ರ ಹಿನ್ನೆಲೆಯಲ್ಲಿ ಶಾಲಾ ಪ್ರಾರಂಭ ವಿಳಂಬವಾಗಿದ್ದರಿಂದ 10ನೇ ತರಗತಿ ಒಳಗೊಂಡಂತೆ ಎಲ್ಲ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾಗಮ ಕಾರ್ಯಕ್ರಮವನ್ನು ದಿನಾಂಕ; 04.08.2020 ರಿಂದ 12.10.2020ರವರೆಗೆ ನಡೆಸಲಾಗಿದೆ.<br>9. ದಿನಾಂಕ 01.01.2021 ರಿಂದ ರಾಜ್ಯದಲ್ಲಿನ ಎಲ್ಲ ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ ಪ್ರೌಢ ಶಾಲೆಗಳಲ್ಲಿನ 10ನೇ ತರಗತಿಯನ್ನು ಪ್ರತಿ ದಿನ 10 ರಿಂದ 12.30ರವರೆಗೆ ಶಾಲೆ ನಡೆಸಲಾಗಿದೆ.<br>10. ರಾಜ್ಯದಲ್ಲಿನ ಎಲ್ಲ ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ ಪ್ರೌಢ ಶಾಲೆಗಳಲ್ಲಿನ 9ನೇ ಮತ್ತು 10ನೇ ತರಗತಿಗಳನ್ನು ದಿನಾಂಕ; 01.02.2021 ರಿಂದ ಪ್ರತಿ ದಿನ ಪೂರ್ಣಾವಧಿ ಶಾಲೆ ನಡೆಸಲಾಗುತ್ತಿದೆ. |
| ಇ) | ರಾಜ್ಯದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿರುವ ಸರ್ಕಾರಿ ಪ್ರೌಢಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳಾದ ಕಟ್ಟಡ, ಪ್ರಯೋಗಾಲಯ ಮತ್ತು | ಹೌದು, ಬಂದಿದೆ.<br><br>ಗ್ರಾಮೀಣ ಪ್ರದೇಶಗಳಲ್ಲಿರುವ ಸರ್ಕಾರಿ ಪ್ರೌಢಶಾಲೆಗಳಲ್ಲಿ 1926 ಕೊಠಡಿಗಳ ಕೊರತೆಯಿದ್ದು ವಿವರನ್ನು ಅನುಬಂಧ-1ರಲ್ಲಿ ಲಗತ್ತಿಸಲಾಗಿದೆ. |

| | | |
|---|---|---|
| | ಗ್ರಂಥಾಲಯದಲ್ಲಿ ಪುಸ್ತಕಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: (ಸಂಪೂರ್ಣ ಮಾಹಿತಿ ನೀಡುವುದು) | |
| ಈ) | ಹಾಗಿದ್ದಲ್ಲಿ, ಅವುಗಳ ಕೊರತೆ ಸರಿಪಡಿಸಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ಮುಂದುವರೆದು ಯೋಜನಾ ಕಾರ್ಯಕ್ರಮಗಳಡಿ 02 ವರ್ಷಗಳ ಪ್ಯಾಕೇಜ್ ಆಗಿ ಪರಿಗಣಿಸಿ ಗ್ರಾಮೀಣ ಪ್ರದೇಶದ ಪ್ರೌಢ ಶಾಲೆಗಳ 406 ಕೊಠಡಿಗಳ ನಿರ್ಮಾಣಕ್ಕಾಗಿ ರೂ.6400.01 ಲಕ್ಷಗಳ ಅನುದಾನ ಮಂಜೂರಾಗಿರುತ್ತದೆ. ಪ್ರಸಕ್ತ 2020-21ರಲ್ಲಿ ಶೇ.50ರಷ್ಟು ರೂ.3200.01 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. (ವಿವರ ಅನುಬಂಧ-2ರಲ್ಲಿ ಲಗತ್ತಿಸಲಾಗಿದೆ). |

ಸಂಖ್ಯೆ: ಇಪಿ 29 ಎಸ್‌ಎಲ್‌ಬಿ 2021

S. Su

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು

ಅನುಬಂಧ-1

**2020-21 ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಅವಶ್ಯಕತೆ ಇರುವ ಸರ್ಕಾರಿ ಪ್ರೌಢ ಶಾಲೆಗಳ ಕೊಠಡಿಗಳ ಸಂಖ್ಯೆ**

| ಕ್ರ ಸಂ | ಜಿಲ್ಲೆಯ ಹೆಸರು | ಸರ್ಕಾರಿ ಶಾಲೆಗಳಲ್ಲಿ ಅವಶ್ಯಕತೆಯಿರುವ ಕೊಠಡಿಗಳ ಸಂಖ್ಯೆ |
|---|---|---|
| 1 | 3 | 4 |
| 1 | Bagalkote | 117 |
| 2 | Ballari | 144 |
| 3 | Belagavi | 57 |
| 4 | Bengaluru North | 15 |
| 5 | Bengaluru Rural | 15 |
| 6 | Bengaluru South | 20 |
| 7 | Bidar | 10 |
| 8 | Chamarajanagar | 13 |
| 9 | Chikkaballapur | 22 |
| 10 | Chikkamagaluru | 29 |
| 11 | Chikodi | 97 |
| 12 | Chitradurga | 80 |
| 13 | Dakshina Kannada | 56 |
| 14 | Davanagere | 99 |
| 15 | Dharwad | 42 |
| 16 | Gadag | 63 |
| 17 | Hassan | 63 |
| 18 | Haveri | 31 |
| 19 | Kalaburagi | 67 |
| 20 | Kodagu | 11 |
| 21 | Kolar | 48 |
| 22 | Koppal | 39 |
| 23 | Madhugiri | 36 |
| 24 | Mandya | 52 |
| 25 | Mysuru | 155 |
| 26 | Raichur | 21 |
| 27 | Ramanagara | 106 |
| 28 | Shivamogga | 70 |
| 29 | Sirsi | 23 |
| 30 | Tumakuru | 70 |
| 31 | Udupi | 10 |
| 32 | Uttara Kannada | 23 |
| 33 | Vijayapura | 91 |
| 34 | Yadgiri | 129 |
| **Total** | | **1926** |

ಅನುಬಂಧ-2

**2020-21 ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶಗಳ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಅವಶ್ಯಕತೆ ಇರುವ ಕೊಠಡಿಗಳಿಗೆ ಬಿಡುಗಡೆಯಾದ ಅನುದಾನದ ವಿವರ**

| ಕ್ರಸಂ | ಜಿಲ್ಲೆಯ ಹೆಸರು | ಕೊಠಡಿಗಳ ಸಂಖ್ಯೆ | 2020-21 ಹಾಗೂ 2021-22ನೇ ಸಾಲಿಗೆ ಮಂಜೂರಾದ ಅನುದಾನ(ಲಕ್ಷಗಳಲ್ಲಿ) | 2020-21ನೇ ಸಾಲಿಗೆ ಶೇ.50ರಷ್ಟು ಬಿಡುಗಡೆಯಾದ ಅನುದಾನ (ಲಕ್ಷಗಳಲ್ಲಿ) |
|---|---|---|---|---|
| 1 | Bagalkote | 18 | 284.29 | 142.14 |
| 2 | Ballari | 19 | 299.25 | 149.63 |
| 3 | Belagavi | 26 | 403.99 | 201.99 |
| 4 | Bengaluru North | 6 | 100.80 | 50.40 |
| 5 | Bengaluru Rural | 7 | 104.74 | 52.37 |
| 6 | Bengaluru South | 2 | 25.20 | 12.60 |
| 7 | Bidar | 10 | 164.59 | 82.29 |
| 8 | Chamarajanagar | 18 | 284.29 | 142.14 |
| 9 | Chikkaballapur | 12 | 194.51 | 97.26 |
| 10 | Chikkamagaluru | 13 | 209.48 | 104.74 |
| 11 | Chikodi | 29 | 448.88 | 224.44 |
| 12 | Chitradurga | 15 | 239.40 | 119.70 |
| 13 | Dakshina Kannada | 15 | 239.40 | 119.70 |
| 14 | Davanagere | 28 | 433.91 | 216.96 |
| 15 | Dharwad | 5 | 75.60 | 37.80 |
| 16 | Gadag | 5 | 74.81 | 37.41 |
| 17 | Hassan | 11 | 179.55 | 89.78 |
| 18 | Haveri | 8 | 119.70 | 59.85 |
| 19 | Kalaburagi | 8 | 119.70 | 59.85 |
| 20 | Kodagu | 2 | 29.93 | 14.96 |
| 21 | Kolar | 5 | 74.81 | 37.41 |
| 22 | Koppal | 7 | 104.74 | 52.37 |
| 23 | Madhugiri | 8 | 119.70 | 59.85 |
| 24 | Mandya | 10 | 149.63 | 74.81 |
| 25 | Mysuru | 16 | 252.00 | 126.00 |
| 26 | Raichur | 6 | 89.78 | 44.89 |
| 27 | Ramanagara | 12 | 194.51 | 97.26 |
| 28 | Shivamogga | 23 | 365.40 | 182.70 |
| 29 | Sirsi | 5 | 74.81 | 37.41 |
| 30 | Tumakuru | 17 | 269.33 | 134.66 |
| 31 | Udupi | 7 | 104.74 | 52.37 |
| 32 | Uttara Kannada | 6 | 89.78 | 44.89 |
| 33 | Vijayapura | 20 | 314.21 | 157.11 |
| 34 | Yadgiri | 10 | 164.59 | 82.29 |
| **Total** | | **406** | **6,400.01** | **3,200.01** |

* ಪ್ರಸ್ತುತ ಸಾಲಿನಲ್ಲಿ 406 ಕೊಠಡಿಗಳಿಗೆ ಅನುದಾನ ಬಿಡುಗಡೆ ಮಾಡಿದ್ದು, ಉಳಿದ ಕೊಠಡಿಗಳಿಗೆ ಅನುದಾನದ ಲಭ್ಯತೆ ಆಧರಿಸಿ ಹಂತ ಹಂತವಾಗಿ ಕ್ರಮ ಕೈಗೊಳ್ಳಲಾಗುವುದು.

